| | |
|---|---|
| 18. Authority who countersignsthe payee's receipt | Commissioner for Cane Development and Director of Sugar, Bangalore. |
| 19.Authority who maintains loan ledger and watches recovery | Commissioner for Cane Development and Director of Sugar, Bangalore. |
| 20.Authority responsible for reconciliation and monitoring of loan. | Commissioner for Cane Development and Director of Sugar, Bangalore. |
| 21. Authority to whom utilisation certificates are to be given | Commissioner for Cane Development and Director of Sugar, Bangalore. |
| 22. Authority who should furnish estimate of recovery of loan and interest for inclusion in th budget estimates. | Commissioner for Cane Development and Director of Sugar, Bangalore. |

**B.RAMASWAMY**
Under Secretary to Government
Commerce and Industries Department (Co-operative Sugar)

**PR.384**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:–** ರೈತರ ಸಹಕಾರಿ ಸಕ್ಕರೆ ಕಾರ್ಖಾನೆ, ರನ್ನಾ ನಗರ, ಮುಧೋಳ ತಾಲ್ಲೂಕು, ಬಾಗಲಕೋಟೆ ಇದಕ್ಕೆ ಮಂಜೂರು ಮಾಡಿ ಬಿಡುಗಡೆ ಮಾಡಿರುವ `4.00 ಕೋಟಿಗಳ ಮೃದು ಸಾಲದ ಮರುಪಾವತಿಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:–**
1. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರ ಪತ್ರ ಸಂಖ್ಯೆ ಡಿಎಸ್‌ಕೆ/ಎಫ್‌ಐಎನ್/ 09/2004–05, ದಿನಾಂಕ 3.1.2012 ಮತ್ತು 17.3.2012.
2. ಸರ್ಕಾರದ ಆದೇಶ ಸಂಖ್ಯೆ: ವಾಕೈ 80 ಸಸಕಾ 2010 ದಿನಾಂಕ 26.4.2012.

**ಪ್ರಸ್ತಾವನೆ:–**

ರೈತರ ಸಹಕಾರಿ ಸಕ್ಕರೆ ಕಾರ್ಖಾನೆ, ರನ್ನಾ ನಗರ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ, ಇವರು ಹುಡ್ಕೋ ಸಂಸ್ಥೆಗೆ ಮರುಪಾವತಿಸಬೇಕಾಗಿದ್ದ ಸಾಲವನ್ನು ಏಕಕಾಲಿಕ ತೀರುವಳಿ ಯೋಜನೆಯಡಿಯಲ್ಲಿ ಮರುಪಾವತಿಸಲು `3.00 ಕೋಟಿಗಳ ಮೃದು ಸಾಲವನ್ನು ಕೆಲವೊಂದು ಷರತ್ತುಗಳೊಂದಿಗೆ ಮಂಜೂರು ಮಾಡುವಂತೆ ಮೇಲೆ (1)ರಲ್ಲಿ ಓದಲಾದ ದಿನಾಂಕ 3.1.2012ರ ಪತ್ರದ ಮೂಲಕ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ತಮ್ಮ ಶಿಫಾರಸ್ಸಿನೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು.

ಕಾರ್ಖಾನೆಯ ಸಾಲವನ್ನು ಒಂದೇ ಕಂತಿನಲ್ಲಿ ಪಾವತಿಸಿದಲ್ಲಿ `891.00 ಲಕ್ಷಗಳನ್ನು ಮನ್ನಾ ಮಾಡುವುದಾಗಿ ಹುಡ್ಕೋ ಸಂಸ್ಥೆಯು ತಿಳಿಸಿರುವುದಾಗಿ ಮೇಲೆ (1)ರಲ್ಲಿ ಓದಲಾದ ದಿನಾಂಕ 17.3.2012ರ ಪತ್ರದಲ್ಲಿ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಕಾರ್ಖಾನೆಯ ಆರ್ಥಿಕ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಹುಡ್ಕೋ ಸಂಸ್ಥೆಯ ಷರತ್ತಿನಂತೆ ಸಾಲವನ್ನು ಮರುಪಾವತಿಸಲು ಸಾಧ್ಯವಾಗದ ಕಾರಣ ಕೆಲವು ಷರತ್ತುಗಳೊಂದಿಗೆ `600.00 ಲಕ್ಷಗಳನ್ನು ರೈತರ ಸಹಕಾರಿ ಸಕ್ಕರೆ ಕಾರ್ಖಾನೆಗೆ ಮೃದು ಸಾಲವಾಗಿ ಮಂಜೂರು ಮಾಡಲು ಕೋರಿದ್ದರು.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮೇಲೆ (2)ರಲ್ಲಿ ಓದಲಾದ ಆದೇಶದ ಮೂಲಕ `400.00 ಲಕ್ಷಗಳನ್ನು ರೈತರ ಸಹಕಾರಿ ಸಕ್ಕರೆ ಕಾರ್ಖಾನೆಗೆ ಮೃದು ಸಾಲವಾಗಿ ಬಿಡುಗಡೆ ಮಾಡಿರುತ್ತದೆ.

ರೈತರ ಸಹಕಾರಿ ಸಕ್ಕರೆ ಕಾರ್ಖಾನೆಗೆ ಬಿಡುಗಡೆ ಮಾಡಿರುವ `4.00 ಕೋಟಿಗಳ ಮೃದು ಸಾಲದ ಮರುಪಾವತಿ ಮಾಡುವ ಸಲುವಾಗಿ ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಲು ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 80 ಸಸಕಾ 2011, ಬೆಂಗಳೂರು, ದಿನಾಂಕ: 21.11.2012**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ರೈತರ ಸಹಕಾರಿ ಸಕ್ಕರೆ ಕಾರ್ಖಾನೆ, ರನ್ನಾ ನಗರ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ, ಈ ಕಾರ್ಖಾನೆಗೆ ಹುಡ್ಕೋ ಸಂಸ್ಥೆಯ ಬಾಕಿಗಳನ್ನು ಮರುಪಾವತಿಸಲು ದಿನಾಂಕ 26.4.2012ರ ಸರ್ಕಾರಿ ಆದೇಶ ಸಂಖ್ಯೆ ವಾಕೈ 80 ಸಸಕಾ 2010ರ ಮೂಲಕ ಬಿಡುಗಡೆ ಮಾಡಲಾಗಿರುವ `4.00 ಕೋಟಿಗಳ ಮೃದು ಸಾಲದ ಮರುಪಾವತಿ ಮಾಡುವ ಸಲುವಾಗಿ ಷರತ್ತು ಮತ್ತು ನಿಬಂಧನೆಗಳನ್ನು ಈ ಆದೇಶದ ಅನುಬಂಧದಲ್ಲಿರುವಂತೆ ವಿಧಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: FD 173 Exp–2/2012 ದಿನಾಂಕ 5.11.2012ರಲ್ಲಿನ ಸಹಮತದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಹಕಾರಿ ಸಕ್ಕರೆ)

**ANNEXURE TO THE G.O. NO.CI 80 SASAKA 2010 DATED 21.11.2012 ESSENTIAL DETAILS OF LOANS SANCTIONED VIDE GOVERNMENT ORDERS NO.CI 80 SSK 2010 DATED 26.04.2012**

**LOANS AND ADVANCES BY STATE GOVERNMENT**

<table>
<tr><td>1. Sanctioning Authority</td><td>Government of Karnataka</td></tr>
<tr><td>2. Sanction (G.O.No. and date)</td><td>No.CI 80 SSK 2010, 26.04.2012</td></tr>
<tr><td>3. To whom sanctioned</td><td>Raitara Sahakari Sakkare Karkhane Niymitha, Rannanagara, Mudol Taluk, Bagalkot District.</td></tr>
<tr><td>4. Amount sanctioned (in words and figures)</td><td>`4.00 crores (Rupees four crores only)</td></tr>
<tr><td>5. Sanction valid upto</td><td>Not applicable</td></tr>
<tr><td>6. Purpose of the loan</td><td>To repay the loan amount to HUDCO</td></tr>
<tr><td>7. Payable in cash or ajustment</td><td>Cash/cheque</td></tr>
<tr><td>8. Head of Account to which the loan is debitable</td><td>Plan</td></tr>
<tr><td>9. Head of Account to which the loan is debitable</td><td>6860-04-101-0-29</td></tr>
<tr><td>10. Progressive amount of loan sanctioned to date in the financial year</td><td><table><tr><td>G.O.No.and date</td><td>Amount (`in crores)</td></tr><tr><td>No.CI 80 SSK 2010 Dated 26.04.2012</td><td>4.00</td></tr><tr><td>Total</td><td>4.00</td></tr></table></td></tr>
<tr><td>11. Period of Loan</td><td>One year</td></tr>
<tr><td>12. Moratorium towards repayment, if any</td><td>No Moratorium</td></tr>
<tr><td>13. Date and year from which repayment is to commence</td><td>From the date of Drawing of loans</td></tr>
<tr><td>14. Mode of repayment</td><td>By cheque or DD</td></tr>
<tr><td>15. Rate of Interest<br>a) Effective (if installment received on or before due date)<br>b) Normal rate (if installment not received on or before due date)<br>c) Penal rate of interest (on over due installment for the period of default)<br>d) Mode of recovery of interest</td><td>10% p.a.</td></tr>
<tr><td>16. Adjustment of over due loans, if any</td><td>--</td></tr>
<tr><td>17. Authority, who countersigns the payee's receipt</td><td>Commissioner for Cane Development and Director of Sugar, Bangalore.</td></tr>
<tr><td>18. Authority who maintains loan ledger and watchers recovery</td><td>Commissioner for Cane Development and Director of Sugar, Bangalore.</td></tr>
<tr><td>19.Authority responsible for reconciliation and monitoring of loan</td><td>Commissioner for Cane Development and Director of Sugar, Bangalore.</td></tr>
<tr><td>20. Authority to whom utilization certificates are to be given</td><td>Commissioner for Cane Development and Director of Sugar, Bangalore.</td></tr>
<tr><td>21. Authority who should furnish estimate of recovery of loan and interest for inclusion in the budget estimates.</td><td>Commissioner for Cane Development and Director of Sugar, Bangalore.</td></tr>
</table>

In addition to the above, the Raitara Sahakari Sakkare Karkhane is directed to open an Escrow account in which `100/quintal of sugar sales should be deposited for servicing/repaying the Government loan of `4.00 crores. Commissioner for Cane Development and Director of Sugar, Bangalore, should ensure compliance to this condition.

**B.RAMASWAMY**
Under Secretary to Government
Commerce and Industries Department (Co-operative Sugar)

**PR.382**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಹಿರಿಯೂರು, ಈ ಕಾರ್ಖಾನೆಯ ಕಾರ್ಮಿಕರ ವೇತನ ಬಾಕಿಗಳ ಪಾವತಿಯ ಬಗ್ಗೆ.

**ಓದಲಾಗಿದೆ:** 1) ರಿಟ್ ಅರ್ಜಿ ಸಂಖ್ಯೆ: 9196/2006ರ ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯದ ಆದೇಶ ದಿನಾಂಕ 23.01.2012.

2) ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ:ಡಿಎಸ್‌ಕೆ/ಎಫ್‌ಐಎನ್/26/2011-12 ದಿನಾಂಕ 17.07.2012 ಮತ್ತು 23.08.2012.

3) ಐ.ಎ.ಸಂಖ್ಯೆ: 1/12 ಮತ್ತು 2/12 c/w ರಿಟ್ ಅರ್ಜಿ ಸಂಖ್ಯೆ: 9196/2006ರ ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯದ ಆದೇಶ ದಿನಾಂಕ 3.12.2012.

4) ಸಮ ಸಂಖ್ಯೆಯ ಪತ್ರ ದಿನಾಂಕ 20.12.2012.

5) ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ:ಡಿಎಸ್‌ಕೆ/ಎಫ್‌ಐಎನ್/26/2011-12 ದಿನಾಂಕ 11.01.2013.

**ಪ್ರಸ್ತಾವನೆ:-**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆಯ ಕಾರ್ಮಿಕರ ಕ್ಲೇಮ್‌ಗಳನ್ನು ಸದರಿ ಅದೇಶವು ತಲುಪಿದ 6 ತಿಂಗಳ ಒಳಗಾಗಿ ಇತ್ಯರ್ಥಪಡಿಸಲು ಸೂಚಿಸಿತ್ತು. ಸದರಿ ಆದೇಶವನ್ನು ಜಾರಿಗೊಳಿಸುವ ಸಲುವಾಗಿ ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆಗೆ ಅಗತ್ಯವಿದ್ದ ರೂ.14.06 ಕೋಟಿಗಳನ್ನು ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರದಿಂದ ದೊರೆಯುವ ಪರಿಹಾರದ ಮೊತ್ತದಿಂದ ಸರ್ಕಾರಕ್ಕೆ ಹಿಂದಿರುಗಿಸುವ ಅಥವಾ ಕಾರ್ಖಾನೆಯ ಗುತ್ತಿಗೆ/ಮಾರಾಟದಿಂದ ದೊರೆಯುವ ಮೊತ್ತದಿಂದ ಪ್ರಥಮ ಆದ್ಯತೆಯ ಮೇರೆಗೆ ತೀರುವಳಿ ಮಾಡಲು ಕಾರ್ಖಾನೆಯು ಬದ್ಧವಾಗಿರುವ ಷರತ್ತಿನೊಂದಿಗೆ ಮೃದು ಸಾಲದ ರೂಪದಲ್ಲಿ ಮಂಜೂರು ಮಾಡುವಂತೆ ಮೇಲೆ (2)ರಲ್ಲಿ ಓದಲಾದ ಪತ್ರಗಳ ಮೂಲಕ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಈ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಸದರಿ ಸಕ್ಕರೆ ಕಾರ್ಖಾನೆಯು ಸಹಕಾರಿ ವಲಯದ ಸಕ್ಕರೆ ಕಾರ್ಖಾನೆಯಾಗಿರುವುದರಿಂದ ಹಾಗೂ ಸಾರ್ವಜನಿಕ ವಲಯದ ಕಾರ್ಖಾನೆಯಾಗಿಲ್ಲದಿರುವುದರಿಂದ ಕಾರ್ಖಾನೆಯ ಕಾರ್ಮಿಕರ ವೇತನ ಬಾಕಿಗಳನ್ನು ಪಾವತಿಸುವಲ್ಲಿ ಸರ್ಕಾರದ ಪ್ರತ್ಯಕ್ಷ ಅಥವಾ ಪರೋಕ್ಷ ಬದ್ಧತೆ ಹೊಂದಿಲ್ಲವೆಂದು, ಸದರಿ ವೇತನ ಬಾಕಿಗಳ ಪಾವತಿಗಾಗಿ ಅಗತ್ಯವಿರುವ ಮೊತ್ತವನ್ನು ಕಾರ್ಖಾನೆಯನ್ನು ದೀರ್ಘಾವಧಿಯ ಗುತ್ತಿಗೆ ನೀಡುವ ಮೂಲಕ ಅಥವಾ ಕಾರ್ಖಾನೆಯ ಚರಾ-ಸ್ಥಿರಾಸ್ತಿಗಳನ್ನು ಮಾರಾಟ ಮಾಡುವ ಮೂಲಕ ಕ್ರೋಢೀಕರಿಸಬಹುದೆಂಬ ಅಭಿಪ್ರಾಯದೊಂದಿಗೆ ಪ್ರಸ್ತಾವನೆಯನ್ನು ಪುರಸ್ಕರಿಸಿರುವುದಿಲ್ಲ.

ಈ ನಡುವೆ ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆಯ ಸಿಬ್ಬಂದಿ ಮತ್ತು ಕಾರ್ಮಿಕರ ಒಕ್ಕೂಟವು ದಾಖಲಿಸಿದ್ದ ಮಧ್ಯಂತರ ಮೇಲ್ಮನವಿ ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ಮೇಲೆ (3)ರಲ್ಲಿನ ಆದೇಶದಲ್ಲಿ ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆಯ ಉದ್ಯೋಗಿಗಳ ಕ್ಲೇಮ್‌ಗಳನ್ನು ದಿನಾಂಕ 31.3.2013ರೊಳಗಾಗಿ ಇತ್ಯರ್ಥಪಡಿಸುವಂತೆ ಗಡುವನ್ನು ವಿಧಿಸಿದೆ. ಈ ಹಿನ್ನೆಲೆಯಲ್ಲಿ ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಸ್ಪಷ್ಟ ವಿವರದೊಂದಿಗೆ ಕಾರ್ಖಾನೆಯ ವಸ್ತುಸ್ಥಿತಿ ವರದಿಯನ್ನು ಸಲ್ಲಿಸುವಂತೆ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರನ್ನು ಕೋರಲಾಗಿತ್ತು. ಇದಕ್ಕೆ ಅನುಸರಣೆಯಾಗಿ ಮೇಲೆ(5)ರಲ್ಲಿ ಓದಲಾದ ಪತ್ರದ ಮೂಲಕ ಕಾರ್ಖಾನೆಯ ವಸ್ತುಸ್ಥಿತಿ ವರದಿಯೊಂದಿಗೆ ಕಾರ್ಮಿಕರ ವೇತನ ಬಾಕಿಗಳ ಪಾವತಿಗಾಗಿ ಸಂಪನ್ಮೂಲವನ್ನು ಸಂಗ್ರಹಿಸುವ ಸಲುವಾಗಿ ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆಯನ್ನು "ಎಲ್ಲಿದೆಯೋ, ಹೇಗಿದೆಯೋ ಹಾಗೆ" (as is where is basis) ಮಾರಾಟ ಮಾಡಬಹುದಾಗಿದೆ ಎಂಬ ಅಭಿಪ್ರಾಯವನ್ನು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಕಬ್ಬು ಅಭಿವೃದ್ಧಿ ಆಯುಕ್ತರ ಮೇಲ್ಕಂಡ ಅಭಿಪ್ರಾಯವನ್ನು ಸಚಿವ ಸಂಪುಟದ ನಿರ್ಣಯಕ್ಕೆ ಸಲ್ಲಿಸಿ, ಅದರ ನಿರ್ಣಯದಂತೆ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 98 ಸಸಕಾ 2011, ಬೆಂಗಳೂರು, ದಿನಾಂಕ: 30.01.2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಾಣಿವಿಲಾಸ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಹಿರಿಯೂರು, ಚಿತ್ರದುರ್ಗ ಜಿಲ್ಲೆ, ಇದರ ಆಸ್ತಿಪಾಸ್ತಿಗಳ ಮೌಲ್ಯಮಾಪನ ಮಾಡಿಸಿ, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ (Karnataka Transparency in Public Procurement) ಕಾಯ್ದೆಯನ್ವಯ ಪಾರದರ್ಶಕ ಹಾಗೂ ಸ್ಪರ್ಧಾತ್ಮಕ ಪ್ರಕ್ರಿಯೆಯ ಮೂಲಕ ಸದರಿ ಕಾರ್ಖಾನೆಯನ್ನು "ಎಲ್ಲಿದೆಯೋ, ಹೇಗಿದೆಯೋ ಹಾಗೆ" (as is where is basis) ಮಾರಾಟ ಮಾಡಿ ಬರುವ ಮೊತ್ತದಿಂದ ಈ ಕಾರ್ಖಾನೆಯ ಕಾರ್ಮಿಕರ ವೇತನ, ಹಣಕಾಸು ಸಂಸ್ಥೆಗಳಿಗೆ ಪಾವತಿಸಬೇಕಾದ ಬಾಕಿ, ಸರ್ಕಾರದ ಸಾಲ ಮರುಪಾವತಿ, ಮತ್ತಿತರೆ ಯಾವುದೇ ಶಾಸನಬದ್ಧ ಹೊಣೆಗಳನ್ನು ಇತ್ಯರ್ಥ ಪಡಿಸುವ ಷರತ್ತಿನೊಂದಿಗೆ ಕಾರ್ಖಾನೆಯನ್ನು ಮಾರಾಟ ಮಾಡಲು ಸರ್ಕಾರದ ಅನುಮೋದನೆ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ರಾಮಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

**PR.377** ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಹಕಾರಿ ಸಕ್ಕರೆ)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ದಕ್ಷಿಣ ಕನ್ನಡ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಬ್ರಹ್ಮಾವರ ಸಂಸ್ಥೆಗೆ ಮಂಜೂರು ಮಾಡಲಾಗಿರುವ ರೂ.286.48 ಲಕ್ಷ ಸಾಲ ಮರುಪಾವತಿಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿಸಿ 05 ಸಿಓಎಫ್ 82, ದಿನಾಂಕ 19.8.1982.
2) ಸರ್ಕಾರದ ಆದೇಶ ಸಂಖ್ಯೆ: ಸಇ 46 ಸಸಕಾ 2007, ದಿನಾಂಕ 27.12.2007.

**ಪ್ರಸ್ತಾವನೆ:–**

ಮೇಲೆ ಓದಲಾದ (1)ರ ಆದೇಶದಲ್ಲಿ ದಕ್ಷಿಣ ಕನ್ನಡ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಬ್ರಹ್ಮಾವರ ಸಂಸ್ಥೆಗೆ ಹಣಕಾಸು ಸಂಸ್ಥೆಗಳಿಂದ ರೂ. 430.00 ಲಕ್ಷಗಳ ಅವಧಿ ಸಾಲವನ್ನು ಪಡೆಯುವ ಸಲುವಾಗಿ ಸರ್ಕಾರದ ಖಾತರಿಯನ್ನು ಕೆಲವು ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ನೀಡಲಾಗಿತ್ತು. ಈ ಮೊತ್ತದ ಪೈಕಿ ಕಾರ್ಖಾನೆಯು ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನಿಂದ ರೂ.100.00 ಲಕ್ಷಗಳ ಸಾಲವನ್ನು ಪಡೆದಿರುತ್ತದೆ

ಕಾರ್ಖಾನೆಯು ಅಪೆಕ್ಸ್ ಬ್ಯಾಂಕಿನಿಂದ ಪಡೆದಿರುವ ರೂ.100.00 ಲಕ್ಷಗಳ ಅವಧಿ ಸಾಲವನ್ನು ಸಕಾಲದಲ್ಲಿ ಬ್ಯಾಂಕಿಗೆ ಮರುಪಾವತಿಸದೇ ಇರುವುದರಿಂದ, ಸದರಿ ಸಾಲಕ್ಕೆ ನೀಡಿರುವ ಖಾತರಿಯನ್ನು ಇನ್‌ವೋಕ್ ಮಾಡಿ ಬಾಕಿಯಿರುವ ಒಟ್ಟು ರೂ.286.48 ಲಕ್ಷಗಳನ್ನು (ಅಸಲು ರೂ.98.87 ಲಕ್ಷ ಮತ್ತು ಬಡ್ಡಿ ರೂ.187.61 ಲಕ್ಷಗಳು) ತಕ್ಷಣವೇ ಪಾವತಿಸುವಂತೆ ಬ್ಯಾಂಕ್ ಕೋರಿರುತ್ತದೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಕಾರ್ಖಾನೆಯಿಂದ ಬ್ಯಾಂಕಿಗೆ ಪಾವತಿಸಲು ಬಾಕಿಯಿರುವ ಒಟ್ಟು ರೂ.286.48 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ದಕ್ಷಿಣ ಕನ್ನಡ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ.286.48 ಲಕ್ಷಗಳ ಮರುಪಾವತಿಗೆ ಸಂಬಂಧಿಸಿದಂತೆ ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 105 ಸಸಕಾ 2010, ಬೆಂಗಳೂರು, ದಿನಾಂಕ: 18.10.2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಬ್ರಹ್ಮಾವರ, ಇದಕ್ಕೆ ದಿನಾಂಕ 27.12.2007ರ ಆದೇಶದ ಮೂಲಕ ಬಿಡುಗಡೆ ಮಾಡಲಾಗಿರುವ ರೂ.286.48 ಲಕ್ಷಗಳ ಸಾಲದ ಮರುಪಾವತಿ ಸಂಬಂಧವಾಗಿ ಷರತ್ತು ಮತ್ತು ನಿಬಂಧನೆಗಳನ್ನು ಈ ಆದೇಶದ ಅನುಬಂಧದ ಪ್ರಕಾರ ವಿಧಿಸಲಾಗಿದೆ.

ಈ ಆದೇಶವನ್ನು ಎಫ್‌ಡಿ 432 ವೆಚ್ಚ–2/2011 ದಿನಾಂಕ 26.9.2012ರ ಅನಧಿಕೃತ ಟಿಪ್ಪಣಿಯ ಮೂಲಕ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಹಕಾರಿ ಸಕ್ಕರೆ)

**ANNEXURE TO THE G.O. NO.CI 105 SASAKA 2010, DATED 18.10.2012 ESSENTIAL DETAILS OF LOANS SANCTIONED VIDE GOVERNMENT ORDERS**

**NO.CO 46 SASAKA 2007, DATED 27.12.2007**

**LOANS AND ADVANCES BY STATE GOVERNMENT**

| | | |
|---|---|---|
| 1. Sanctioning Authority | Government of Karnataka | |
| 2. Sanction (G.O.No. and date) | No.CO 46 SaSaKa 2007, dated 27.12.2007 | |
| 3. To whom sanctioned | The Dakshina Kannada Sahakari Sakkare Karkhane Niymitha, Brahamavar. | |
| 4. Amount sanctione (in words and figures) | `286.48 lakhs (Rupees two hundred and eighty six lakhs and forty eighty thousand only) | |
| 5. Sanction valid upto | Not applicable | |
| 6. Purpose of the loan | To clear Karnataka State Co-operative Apex Bank dues. | |
| 7. Payable in cash or adjustment | Cash/cheque | |
| 8. Head of Account to which the loan is debitable | Plan | |
| 9. Head of Account to which the loan is debitable | "6860-04-101-0-20-394(Plan)" | |
| 10. Progressive amount of loan sanctioned to date in the financial year | G.O.No.and date | Amount (`in crores) |
| | No.CO 105 SaSaKa 2007 Dated 27.12.2007 | 286.48 |
| | Total | 286.48 |
| 11. Period of Loan | 10 years | |

| | |
|---|---|
| 12. Moratorium towards repayment, if any | Nil |
| 13. Date and year from which repayment is to commence | 1.4.2008 |
| 14. Mode of repayment | By cheque or DD |
| 15. Rate of Interest<br>a) Effective (if installment received on or before due date)<br>b) Normal rate (if installment not received on or before due date)<br>c) Penal rate of interest (on over due installment for the periodof default)<br>d) Mode of recovery of interest | <br>13%<br>2.5%<br><br>Cash or D.D |

**B.RAMASWAMY**
Under Secretary to Government
Commerce and Industries Department (Co-operative Sugar)

**PR.379**

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಮುಗುಟಖಾನ ಹುಬ್ಬಳ್ಳಿ, ಬೆಳಗಾವಿ ಜಿಲ್ಲೆ, ಈ ಕಾರ್ಖಾನೆಯಲ್ಲಿ ನಡೆದಿದೆಯೆನ್ನಲಾದ ಅವ್ಯವಹಾರಗಳ ಬಗ್ಗೆ.

**ಓದಲಾಗಿದೆ:**
1. ಮಾನ್ಯ ತೋಟಗಾರಿಕೆ ಹಾಗೂ ಸಕ್ಕರೆ ಸಚಿವರು ಮತ್ತು ದಾವಣಗೆರೆ ಜಿಲ್ಲಾ ಉಸ್ತುವಾರಿ ಸಚಿವರ ಟಿಪ್ಪಣಿ ಸಂಖ್ಯೆ: ತೋ.ಸ/237/11-12 ದಿನಾಂಕ 17.11.2011.
2. ಪತ್ರ ಸಂಖ್ಯೆ: ವಾಕೈ 128 ಸಸಕಾ 2011 ದಿನಾಂಕ 14.12.2011.
3. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಇವರ ಪತ್ರ ಸಂಖ್ಯೆ: ಡಿಎಸ್‌ಕೆ/ಇಎಸ್‌ಟಿಎಸ್/10/2011-12 ದಿನಾಂಕ 22.03.2012 ಮತ್ತು 08.01.2013.
4. ಕಾರಣ ಕೇಳುವ ನೋಟೀಸಿನ ಸಂಖ್ಯೆ: ವಾಕೈ 128 ಸಸಕಾ 2011 ದಿನಾಂಕ 15.01.2013.
5. ಶ್ರೀ ಎಂ.ಡಿ.ಮಲ್ಲೂರ, ವ್ಯವಸ್ಥಾಪಕ ನಿರ್ದೇಶಕರು, ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಮುಗುಟಖಾನ ಹುಬ್ಬಳ್ಳಿ, ಬೆಳಗಾವಿ ಜಿಲ್ಲೆ ರವರ ಪತ್ರ ಸಂಖ್ಯೆ: ಆಡಳಿತ/2471 ದಿನಾಂಕ 23.01.2013.

**ಪ್ರಸ್ತಾವನೆ**

ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಮುಗುಟಖಾನ ಹುಬ್ಬಳ್ಳಿ, ಬೆಳಗಾವಿ ಜಿಲ್ಲೆ, ಈ ಕಾರ್ಖಾನೆಯಲ್ಲಿ ಸ್ಪಿರಿಟ್ ಮತ್ತು ಸಕ್ಕರೆ ಮಾರಾಟದಲ್ಲಿ ಹಾಗೂ ವಾಹನಗಳ ಖರೀದಿಯಲ್ಲಿ ಮತ್ತು ಅವುಗಳ ಬಳಕೆಯಲ್ಲಿ ಅವ್ಯವಹಾರಗಳು ನಡೆದಿವೆ ಎಂಬ ಬಗ್ಗೆ ರೈತರು ಹಾಗೂ ಜನಪ್ರತಿನಿಧಿಗಳಿಂದ ದೂರುಗಳು ಬಂದ ಹಿನ್ನೆಲೆಯಲ್ಲಿ ಮೇಲೆ (1)ರಲ್ಲಿ ಓದಲಾದ ಟಿಪ್ಪಣಿಯ ಮೂಲಕ ಸದರಿ ವಿಷಯದ ಬಗ್ಗೆ ವಿವರವಾದ ತನಿಖೆಯನ್ನು ನಡೆಸಿ ವರದಿಯನ್ನು ಸಲ್ಲಿಸಲು ಮಾನ್ಯ ತೋಟಗಾರಿಕೆ ಹಾಗೂ ಸಕ್ಕರೆ ಸಚಿವರು ಮತ್ತು ದಾವಣಗೆರೆ ಜಿಲ್ಲಾ ಉಸ್ತುವಾರಿ ಸಚಿವರು ಆದೇಶಿಸಿದ್ದರು. ಸದರಿ ಆದೇಶದನ್ವಯ ಕೂಲಂಕಷ ತನಿಖೆಯನ್ನು ನಡೆಸಿ ವಿವರವಾದ ವರದಿಯನ್ನು ಸಲ್ಲಿಸುವಂತೆ ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರನ್ನು ಕೋರಲಾಗಿತ್ತು.

ಅದರಂತೆ ಸದರಿ ವಿಷಯದ ಕುರಿತು ಕೂಲಂಕಷ ತನಿಖೆಯನ್ನು ನಡೆಸಿ ಮೇಲೆ (3)ರಲ್ಲಿ ಓದಲಾದ ದಿನಾಂಕ 22.03.2012ರ ಪತ್ರದ ಮೂಲಕ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ತನಿಖಾಧಿಕಾರಿಯಾದ ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು ಬೆಳಗಾವಿ ಇವರು ಸಲ್ಲಿಸಿದ ದಿನಾಂಕ 04.01.2012ರ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು, ತಮ್ಮ ದಿನಾಂಕ 08.01.2013ರ ಪತ್ರದ ಮೂಲಕ ತನಿಖಾಧಿಕಾರಿಯವರ ದಿನಾಂಕ 17.12.2012ರ ಪತ್ರದ ಪ್ರತಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ವರದಿಯನ್ನು ಪರಿಶೀಲಿಸಿದ ನಂತರ ಶ್ರೀ ಎಂ.ಡಿ.ಮಲ್ಲೂರ, ವ್ಯವಸ್ಥಾಪಕ ನಿರ್ದೇಶಕರು, ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಮುಗುಟಖಾನ ಹುಬ್ಬಳ್ಳಿ, ಬೆಳಗಾವಿ ಜಿಲ್ಲೆ, ಇವರಿಂದ ಸೂಕ್ತ ಸಮಜಾಯಿಷಿ/ವಿವರಣೆಯನ್ನು ಪಡೆಯುವುದು ಸೂಕ್ತವೆಂದು ಪರಿಗಣಿಸಿ, ಮೇಲೆ (4)ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ಶ್ರೀ ಎಂ.ಡಿ.ಮಲ್ಲೂರ, ಇವರಿಗೆ ಜಾರಿಗೊಳಿಸಲಾಯಿತು. ಸದರಿ ನೋಟೀಸಿಗೆ ಶ್ರೀ ಎಂ.ಡಿ.ಮಲ್ಲೂರ, ರವರು ಮೇಲೆ (5)ರಲ್ಲಿ ಓದಲಾದ ಪತ್ರದ ಮೂಲಕ ತಮ್ಮ ವಿರುದ್ಧದ ಆಪಾದನೆಗಳನ್ನು ಅಲ್ಲಗಳೆದು, ಕಾರ್ಖಾನೆಯ ದೈನಂದಿನ ಕಾರ್ಯಗಳು ಕುಂಠಿತವಾಗಬಾರದೆಂಬ ಸದುದ್ದೇಶದಿಂದ ಸಕ್ಕರೆ ನಿರ್ದೇಶನಾಲಯದ ಅನುಮೋದನೆಯನ್ನು ನಿರೀಕ್ಷಿಸಿ ಕಾರ್ಖಾನೆಯ ಆಡಳಿತ ಮಂಡಳಿಯ ನಿರ್ಣಯದ ಪ್ರಕಾರ ಕಾರ್ಖಾನೆಗೆ ಅಗತ್ಯವಿದ್ದ ವಾಹನಗಳನ್ನು ಖರೀದಿಸಿರುವುದಾಗಿ, ಟೆಂಡರ್ ಕಂ ಬಹಿರಂಗ ಹರಾಜಿನ ಮೂಲಕ ಹಳೆಯ ವಾಹನಗಳನ್ನು ಮಾರಾಟ ಮಾಡಿರುವುದಾಗಿ ಮತ್ತು ಕಾರ್ಖಾನೆಗೆ ಸಂಬಂಧಿಸಿದ ಎಲ್ಲಾ ವಾಹನಗಳ

ಲಾಗ್ ಪುಸ್ತಕಗಳನ್ನು ಸಮರ್ಪಕವಾಗಿ ನಿರ್ವಹಿಸುತ್ತಿರುವುದಾಗಿ ಸಮಜಾಯಿಷಿಯನ್ನು ನೀಡುವುದರೊಂದಿಗೆ ಖರೀದಿದಾರರೊಂದಿಗೆ ವ್ಯವಹಾರಿಕವಾಗಿ ಸೌಹಾರ್ದಯುತ ಸಂಬಂಧವನ್ನು ಮುಂದುವರೆಸಿಕೊಂಡು ಹೋಗುವ ದೃಷ್ಟಿಯಿಂದ ಆಡಳಿತ ಮಂಡಳಿಯ ನಿರ್ಣಯದಂತೆ ಸ್ಪಿರಿಟ್ ಮಾರಾಟ ಮಾಡಿರುವುದಾಗಿ ಮತ್ತು ನಿಯಮಾನುಸಾರ ಸಕ್ಕರೆಯನ್ನು ಮುಕ್ತ ಮಾರಾಟ ಮಾಡಿರುವುದಾಗಿ ವಿವರಿಸಿ ತಮ್ಮ ವಿರುದ್ಧದ ಆಪಾದನೆಗಳಿಂದ ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಮೇಲಿನ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ವಾಕೈ 128 ಸಸಕಾ 2011, ಬೆಂಗಳೂರು, ದಿನಾಂಕ:27.02.2013**

ಶ್ರೀ ಎಂ.ಡಿ.ಮಲ್ಲೂರ, ವ್ಯವಸ್ಥಾಪಕ ನಿರ್ದೇಶಕರು, ಶ್ರೀ ಮಲಪ್ರಭಾ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಮುಗಟಖಾನ ಹುಬ್ಬಳ್ಳಿ, ಬೆಳಗಾವಿ ಜಿಲ್ಲೆ ರವರ ವಿರುದ್ಧದ ಆರೋಪಗಳ ಕುರಿತಂತೆ ತನಿಖಾಧಿಕಾರಿಯವರು ಸಲ್ಲಿಸಿರುವ ತನಿಖಾ ವರದಿಯಲ್ಲಿ ಅಪಾದಿತ ಅಧಿಕಾರಿಯಿಂದ ಯಾವುದೇ ನಿಯಮಗಳ ಉಲ್ಲಂಘನೆಯಾಗಿಲ್ಲ ಹಾಗೂ ಆಡಳಿತ ಮಂಡಳಿಯ ನಿರ್ಣಯಗಳಂತೆ ಅವರು ಕ್ರಮಕೈಗೊಂಡಿರುವುದರಿಂದ ಅವರಿಂದ ಯಾವುದೇ ಲೋಪಗಳು ಉಂಟಾಗಿಲ್ಲ ಎಂದು ವರದಿ ಸಲ್ಲಿಸಿರುವುದರ ಮೇರೆಗೆ ಶ್ರೀ ಎಂ.ಡಿ.ಮಲ್ಲೂರ, ಇವರನ್ನು ಆರೋಪಗಳಿಂದ ದೋಷಮುಕ್ತಗೊಳಿಸಿ, ಸದರಿಯವರ ವಿರುದ್ಧ ನಡೆಸಲು ಉದ್ದೇಶಿಸಲಾಗಿದ್ದ ವಿಚಾರಣೆಯನ್ನು ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಬಿ.ರಾಮಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸಹಕಾರಿ ಸಕ್ಕರೆ)

PR.371

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಕೇಂದ್ರ ಸರ್ಕಾರದ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು 2012–13ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ರಾಜ್ಯದ 18 ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಿದ 1/2ನೇ ಕಂತಿನ ಅನುದಾನ ಅನುದಾನಕ್ಕನುಗುಣವಾಗಿ ರಾಜ್ಯದ ಪಾಲಿನ 1/2ನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್–17014/01/2012–13 ಡಿಆರ್‌ಡಿಎ (ಎಸ್‌ಎಲ್ ನಂ.10) ದಿನಾಂಕ 21–05–2012.
2. ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 2 ಎಸ್‌ಜೆವೈ (ಡಿಆರ್‌ಡಿಎ) 2011, ಬೆಂಗಳೂರು, ದಿನಾಂಕ 07–06–2012 ಮತ್ತು 17–09–2012.
3. ಸರ್ಕಾರದ ಆದೇಶ ಸಂಖ್ಯೆ :ಗ್ರಾಅಪ 4 ಎಸ್‌ಜೆವೈ (ಡಿಆರ್‌ಡಿಎ) 2012, ಬೆಂಗಳೂರು, ದಿನಾಂಕ: 17–09–2012, 11.10.2012, 26.11.2012, 6.12.2012, 12.02.2013, 19.03.2013 ಮತ್ತು 25.03.2013.
4. ಸರ್ಕಾರದ ಆದೇಶ ಸಂಖ್ಯೆ :ಗ್ರಾಅಪ 6 ಎಸ್‌ಜೆವೈ ಡಿಆರ್‌ಡಿಎ 2012, ಬೆಂಗಳೂರು, ದಿನಾಂಕ: 22.03.2013.
5. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್–17014/11/2012–13 ಡಿಆರ್‌ಡಿಎ(ಎಸ್‌ಎಲ್ ನಂ.41) ದಿನಾಂಕ 24–08–2012, [ಎಸ್‌ಎಲ್ ನಂ.48] ದಿನಾಂಕ 15.11.2012, (ಎಸ್‌ಎಲ್‌ನಂ.75) ದಿನಾಂಕ 16.01.2013, ಡಿಆರ್‌ಡಿಎ [ಎಸ್‌ಎಲ್.ನಂ.109] ದಿನಾಂಕ 28.02.2013.
6. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ: ಆರ್–17014/11/2012–13 ಡಿಆರ್‌ಡಿಎ (ಎಸ್‌ಎಲ್ ನಂ.126) ದಿನಾಂಕ 22.03.2013

**ಪ್ರಸ್ತಾವನೆ:**

ಡಿಆರ್‌ಡಿಎ ಆಡಳಿತ ಯೋಜನೆಯು ಕೇಂದ್ರ ಪುರಸ್ಕೃತ ಯೋಜನೆಯಾಗಿದ್ದು, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು 75:25ರ ಅನುಪಾತದಲ್ಲಿ ಭರಿಸುತ್ತವೆ. 2012–13ನೇ ಸಾಲಿಗೆ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ರಾಜ್ಯದ 29 ಜಿಲ್ಲಾ ಪಂಚಾಯತಿಗಳಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಓದಲಾಗಿದೆ (1) ಮತ್ತು (4)ರ ಪತ್ರಗಳಲ್ಲಿ ಒಂದನೇ ಕಂತಿನ ಅನುದಾನ `10,06,13,000/–ಹಾಗೂ 2ನೇ ಕಂತಿನ ಅನುದಾನ 8 ಜಿಲ್ಲಾ ಪಂಚಾಯತ್‌ಗಳಿಗೆ 2ನೇ ಕಂತಿನ ಅನುದಾನ `.1,23,72,000/– ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಒಂದನೇ ಕಂತಿನ ಅನುದಾನ `3,35,38,000/–ಗಳನ್ನು ಹಾಗೂ 2ನೇ ಕಂತಿನ ಅನುದಾನ `.41,24,000/– ಓದಲಾಗಿದೆ [3]ರ ಆದೇಶಗಳಲ್ಲಿ ಬಿಡುಗಡೆ ಮಾಡಿದೆ.

ಓದಲಾಗಿದೆ [6]ರ ಪತ್ರದಲ್ಲಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು 2012–13ನೇ ಸಾಲಿಗೆ ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತಿಗೆ ಒಂದನೇ ಕಂತಿನ ಅನುದಾನವನ್ನು ಹಾಗೂ ಬಾಗಲಕೋಟೆ, ಬೆಂಗಳೂರು [ಗ್ರಾಮಾಂತರ], ಬೆಳಗಾವಿ, ಬಳ್ಳಾರಿ, ಬೀದರ್, ಚಾಮರಾಜನಗರ, ಗದಗ್, ಗುಲ್ಬರ್ಗಾ, ಹಾಸನ, ಹಾವೇರಿ, ಕೊಡಗು, ಕೋಲಾರ, ರಾಯಚೂರು, ತುಮಕೂರು ಉತ್ತರ ಕನ್ನಡ, ರಾಮನಗರ ಮತ್ತು ಉಡುಪಿ ಜಿಲ್ಲಾ ಪಂಚಾಯತ್‌ಗಳಿಗೆ ಎರಡನೇ ಕಂತಿನ ಅನುದಾನವಾಗಿ ಒಟ್ಟು `3,03,18,000/–ಗಳನ್ನು ಬಿಡುಗಡೆ ಮಾಡಿದೆ.

ಇದಕ್ಕನುಗುಣವಾಗಿ ರಾಜ್ಯದ ಪಾಲಿನ ಅನುದಾನ `.1,01,06,000/–ಗಳನ್ನು ಬಿಡುಗಡೆ ಮಾಡಬೇಕಾಗಿರತ್ತದೆ. ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ಹಾಸನ ಜಿಲ್ಲಾ ಪಂಚಾಯತಿಗೆ `16,28,000/– ತುಮಕೂರು ಜಿಲ್ಲಾ ಪಂಚಾಯತ್‌ಗೆ `.32,28,000/– ಹಾಗೂ ಉಡುಪಿ ಜಿಲ್ಲಾ ಪಂಚಾಯತ್‌ಗೆ `.12,03,000/–ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ಅನುಕ್ರಮವಾಗಿ ರಾಜ್ಯದ ಪಾಲಿನ ಅನುದಾನ `5,42,000/–, `.9,98,000/– ಹಾಗೂ `4,01,000/– ಬಿಡುಗಡೆ ಮಾಡಬೇಕಾಗಿರುತ್ತದೆ. ಆದರೆ ರಾಜ್ಯದ ಅಯವ್ಯಯದಲ್ಲಿ ಹಾಸನ ಜಿಲ್ಲಾ ಪಂಚಾಯತ್‌ಗೆ ಒದಗಿಸಿದ ಅನುದಾನ ಪೂರ್ಣವಾಗಿ ಬಿಡುಗಡೆ ಮಾಡಿರುವುದರಿಂದ ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಲು ಸಾಧ್ಯವಾಗುತ್ತಿಲ್ಲ. ಇದಲ್ಲದೆ ಉತ್ತರ ಕನ್ನಡ ಮತ್ತು ಉಡುಪಿ ಜಿಲ್ಲಾ ಪಂಚಾಯತ್‌ಗಳಿಗೆ ರಾಜ್ಯದ ಅಯವ್ಯಯದಲ್ಲಿ ಒದಗಿಸಿದ ಅನುದಾನದಲ್ಲಿ ಕೊರತೆ ಇರುವ ಕಾರಣ ಅನುದಾನದ ಲಭ್ಯತೆಗೆ ಅನುಸಾರವಾಗಿ ಬಿಡುಗಡೆ ಮಾಡಲಾಗುತ್ತಿದೆ. ಈ ಕಾರಣದಿಂದಾಗಿ ರಾಜ್ಯದ ಪಾಲಿನ ಅನುದಾನ `1,01,06,000/– ಗಳಿಗೆ ಬದಲಿಗೆ **`88,14,000/–** ಮಾತ್ರ ಬಿಡುಗಡೆ ಮಾಡಲಾಗುತ್ತಿದೆ. ಆದುದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ : ಗ್ರಾಅಪ 4 ಎಸ್‌ಜೆವೈ (ಡಿಆರ್‌ಡಿಎ) 2012, ಬೆಂಗಳೂರು, ದಿನಾಂಕ: 28.03.2013**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ 2012–13ನೇ ಸಾಲಿನಲ್ಲಿ ಅನುಬಂಧದಲ್ಲಿ ತೋರಿಸಿರುವಂತೆ, ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತಿಗೆ ಒಂದನೇ ಕಂತಿನ ಅನುದಾನವನ್ನು ಹಾಗೂ ಬಾಗಲಕೋಟೆ, ಬೆಂಗಳೂರು [ಗ್ರಾಮಾಂತರ], ಬೆಳಗಾವಿ, ಬಳ್ಳಾರಿ, ಬೀದರ್, ಚಾಮರಾಜನಗರ, ಗದಗ್, ಗುಲ್ಬರ್ಗಾ, ಹಾಸನ, ಹಾವೇರಿ, ಕೊಡಗು, ಕೋಲಾರ, ರಾಯಚೂರು, ತುಮಕೂರು, ಉತ್ತರ ಕನ್ನಡ, ರಾಮನಗರ ಮತ್ತು ಉಡುಪಿ ಜಿಲ್ಲಾ ಪಂಚಾಯತ್‌ಗಳಿಗೆ ಎರಡನೇ ಕಂತಿನ ಅನುದಾನ ಒಟ್ಟಾರೆ `88,14,000/– ಗಳನ್ನು (ಎಂಭತ್ತೆಂಟು ಲಕ್ಷದ ಹದಿನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಕೆಳಕಂಡ ಷರತ್ತುಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು:**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸಲು ಅವಕಾಶವಿದೆ. ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನವನ್ನು ಸೇರಿ ವೆಚ್ಚವನ್ನು ಭರಿಸಬೇಕಾಗಿರುವುದರಿಂದ ರಾಜ್ಯದ ಪಾಲಿನ ಅನುದಾನವನ್ನು ವೇತನ ಮತ್ತು ವೇತನೇತರವೆಂದು ವಿಂಗಡಿಸದೆ ಒಟ್ಟಾರೆ ರಾಜ್ಯದ ಪಾಲಿನ ಅನುದಾನವನ್ನು ಖಜಾನೆಯಿಂದ ಡ್ರಾ ಮಾಡಲು ಖಜಾನಾಧಿಕಾರಿಗಳು ಅನುಮತಿ ನೀಡತಕ್ಕದ್ದು.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ : "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ– (ಕೇಂದ್ರ ಪುರಸ್ಕೃತ ಯೋಜನೆ) 2012–2013 ಲಿಂಕ್ ಕೋಡ್ 2515–00–196–6–06" (ಹೊಸ ಜಿಲ್ಲಾ ಪಂಚಾಯತ್ ಕೋಡ್ 2515–00–101–0–01) ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ 26–04–2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಆರ್ಥಿಕ ಇಲಾಖೆ (ವೆಚ್ಚ–6) ಯ ಸಂಖ್ಯೆ ಆಇ 172 ವೆಚ್ಚ–6/2011 ದಿನಾಂಕ 30–03–2011 ರ ಸಹಮತಿಯಂತೆ ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಅನುದಾನವನ್ನು ಖಜಾನೆಯಿಂದ ಸೆಳೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳು, ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು {ಸ್ವಉಕಾ} ಹಾಗೂ ಪ.ನಿ.ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ಗಳ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು, ನಿರ್ದೇಶಕರು {ಸ್ವಉಕಾ} ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ: ಗ್ರಾಅಪ 161 ಪಿಬಿಎಸ್ 2013 ದಿನಾಂಕ: 28.03.2013ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ದೀಪ**

ನಿರ್ದೇಶಕರು (ಸ್ವಉಕಾ)

ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಸರ್ಕಾರದ ಆದೇಶದ ಸಂಖ್ಯೆ: ಗ್ರಾಅಪ 4 ಎಸ್‌ಜೆವೈ (ಡಿಆರ್‌ಡಿಎ) 2012, ಬೆಂಗಳೂರು, ದಿನಾಂಕ 28.03.2013ಕ್ಕೆ ಅನುಬಂಧ** [ರೂ.ಗಳಲ್ಲಿ]

| ಕ್ರ ಸಂ | ಜಿಲ್ಲಾ ಪಂಚಾಯತಿಯ ಹೆಸರು | ಜಿಲ್ಲಾ ಕೋಡ್ | ಡಿ.ಡಿ.ಓ ಕೋಡ್ | 2012–13 ನೇ ಸಾಲಿನಲ್ಲಿ ಡಿಆರ್‌ಡಿಎ (ಆಡಳಿತ) ಯೋಜನೆಯಡಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಒಂದನೇ/ಎರಡನೇ ಕಂತಿನ ಅನುದಾನ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಅನುದಾನಕ್ಕನು ಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಾಗಿರುವ ಒಂದನೇ/ಎರಡನೇ ಅನುದಾನ | 2012–13 ನೇ ಸಾಲಿನಲ್ಲಿ ರಾಜ್ಯದ ಆಯವ್ಯಯದಲ್ಲಿ ಜಿಲ್ಲಾ ಪಂಚಾಯತಿ ಗಳಿಗೆ ಹಂಚಿಕೆ ಮಾಡಿದ ಅನುದಾನ | 2012–13 ನೇ ಸಾಲಿನಲ್ಲಿ ಜಿಲ್ಲಾ ಪಂಚಾಯತಿಗಳಿಗೆ ಈವರೆವಿಗೂ ಬಿಡುಗಡೆ ಮಾಡಿರುವ ರಾಜ್ಯದ ಪಾಲಿನ ಅನುದಾನ | 2012–13 ನೇ ಸಾಲಿನಲ್ಲಿ ಬಿಡುಗಡೆ ನಂತರ ಜಿಲ್ಲಾ ಪಂಚಾಯತಿಗಳಲ್ಲಿ ಲಭ್ಯವಿರುವ ಅನುದಾನ (7–8) | 2012–13 ನೇ ಸಾಲಿನ ಲಭ್ಯತೆಗೆ ಅನುಸಾರ ಬಿಡುಗಡೆ ಮಾಡುತ್ತಿರುವ ಒಂದನೇ/ಎರಡನೇ ಕಂತಿನ ಅನುದಾನ |
|---|---|---|---|---|---|---|---|---|---|
| | | | | ಒಂದನೇ ಕಂತು | | | | | |
| | ಚಿಕ್ಕಬಳ್ಳಾಪುರ | 453 | 0600ZZ0001 | 38,92,000 | 12,97,000 | 18,50,000 | 3,75,000 | 14,75,000 | **12,97,000** |
| | | | | ಎರಡನೇ ಕಂತು | | | | | |
| | ಬಾಗಲಕೋಟೆ | 461 | 2900ZZ0001 | 13,91,000 | 4,64,000 | 32,00,000 | 23,20,000 | 8,80,000 | **4,64,000** |
| | ಬೆಂಗಳೂರು (ಗ್ರಾ) | 402 | 0300ZZ8001 | 16,91,000 | 5,64,000 | 44,50,000 | 18,73,000 | 25,77,000 | **5,64,000** |
| | ಬೆಳಗಾಂ | 413 | 2200ZZ0002 | 38,91,000 | 12,97,000 | 47,50,000 | 12,97,000 | 34,53,000 | **12,97,000** |
| | ಬಳ್ಳಾರಿ | 418 | 3400ZZ0001 | 16,28,000 | 5,43,000 | 40,00,000 | 12,97,000 | 27,03,000 | **5,43,000** |
| | ಬೀದರ್ | 419 | 3800ZZ5701 | 1,61,000 | 54,000 | 30,00,000 | 18,72,000 | 11,28,000 | **54,000** |
| | ಚಾಮರಾಜನಗರ | 456 | 1000ZZ0001 | 15,65,000 | 5,22,000 | 29,42,000 | 10,47,000 | 18,95,000 | **5,22,000** |
| | ಗದಗ್ | 462 | 2600ZZ0001 | 10,45,000 | 3,48,000 | 31,25,000 | 19,34,000 | 11,91,000 | **3,48,000** |
| | ಗುಲ್ಬರ್ಗಾ | 417 | 3200ZZ0003 | 4,26,000 | 1,42,000 | 37,00,000 | 23,20,000 | 13,80,000 | **1,42,000** |

| ಕ್ರ ಸಂ | ಜಿಲ್ಲಾ ಪಂಚಾಯತಿಯ ಹೆಸರು | [illegible] | ಡಿ.ಡಿ.ಓ ಕೋಡ್ | 2012–13 ನೇ ಸಾಲಿನಲ್ಲಿ ಡಿಆರ್‌ಡಿಎ (ಆಡಳಿತ) ಯೋಜನೆಯಡಿ ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಒಂದನೇ/ಎರಡನೇ ಕಂತಿನ ಅನುದಾನ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಅನುದಾನಕ್ಕನು ಗುಣವಾಗಿ ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಾಗಿರುವ ಒಂದನೇ/ಎರಡನೇ ಅನುದಾನ | 2012–13 ನೇ ಸಾಲಿನಲ್ಲಿ ರಾಜ್ಯದ ಆಯವ್ಯಯದಲ್ಲಿ ಜಿಲ್ಲಾ ಪಂಚಾಯತಿ ಗಳಿಗೆ ಹಂಚಿಕೆ ಮಾಡಿದ ಅನುದಾನ | 2012–13 ನೇ ಸಾಲಿನಲ್ಲಿ ಜಿಲ್ಲಾ ಪಂಚಾಯತಿಗಳಿಗೆ ಈವರೆವಿಗೂ ಬಿಡುಗಡೆ ಮಾಡಿರುವ ರಾಜ್ಯದ ಪಾಲಿನ ಅನುದಾನ | 2012–13 ನೇ ಸಾಲಿನಲ್ಲಿ ಬಿಡುಗಡೆ ನಂತರ ಜಿಲ್ಲಾ ಪಂಚಾಯತಿಗಳಲ್ಲಿ ಲಭ್ಯವಿರುವ ಅನುದಾನ (7–8) | 2012–13 ನೇ ಸಾಲಿನ ಲಭ್ಯತೆಗೆ ಅನುಸಾರ ಬಿಡುಗಡೆ ಮಾಡುತ್ತಿರುವ ಒಂದನೇ/ಎರಡನೇ ಕಂತಿನ ಅನುದಾನ |
|---|---|---|---|---|---|---|---|---|---|
| | ಹಾಸನ | 410 | 1300ZZ0003 | 16,28,000 | 5,42,000 | 33,19,000 | 33,19,000 | 0 | **0** |
| | ಹಾವೇರಿ | 463 | 2700ZZ0001 | 12,66,000 | 4,22,000 | 30,00,000 | 12,97,000 | 17,03,000 | **4,22,000** |
| | ಕೊಡಗು | 411 | 1200ZZ0001 | 0 | 0 | 24,00,000 | 10,47,000 | 13,53,000 | **0** |
| | ಕೋಲಾರ | 404 | 0700zz8002 | 0 | 0 | 23,26,000 | 10,47,000 | 12,79,000 | **0** |
| | ರಾಯಚೂರು | 420 | 3600ZZ0001 | 31,41,000 | 10,47,000 | 26,31,000 | 10,47,000 | 15,84,000 | **10,47,000** |
| | ತುಮಕೂರು | 406 | 0800ZZ0001 | 32,28,000 | 10,76,000 | 45,38,000 | 23,20,000 | 22,18,000 | **10,76,000** |
| | ಉತ್ತರ ಕನ್ನಡ | 416 | 3000ZZ0080 | 29,95,000 | 9,98,000 | 18,00,000 | 14,79,000 | 3,21,000 | **3,21,000** |
| | ರಾಮನಗರ | 452 | 0400ZZ0001 | 11,67,000 | 3,89,000 | 28,00,000 | 18,73,000 | 9,27,000 | **3,89,000** |
| | ಉಡುಪಿ | 457 | 2000ZZ0001 | 12,03,000 | 4,01,000 | 22,00,000 | 18,72,000 | 3,28,000 | **3,28,000** |
| | | ಒಟ್ಟು | | 3,03,18,000 | 1,01,06,000 | 5,60,31,000 | 2,96,36,000 | 2,63,95,000 | **88,14,000** |

ಎಂ.ದೀಪ
ನಿರ್ದೇಶಕರು (ಸ್ವಉಕಾ)
ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

P.R 472

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಅಡೆಪ್ಪ ಬನ್ನಿ, ಪಿ.ಎಸ್.ಐ., ಕೊಂಚಾವರಂ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಇವಿ/4/ಈವ/2011 (ಆ.ಪು. ಸಂಖ್ಯೆ: 185/ಈವ/2011/1238) ದಿನಾಂಕ: 18–4–2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ಇವರ ಆದೇಶ ಸಂಖ್ಯೆ: ಅಪೀಲು(4)/17/2011–12 (ಓ.ಬಿ. ಸಂಖ್ಯೆ: 31/2011–12) ದಿನಾಂಕ: 14–12–2011
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 11–4–2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)7/2012–13 ದಿನಾಂಕ: 27–7–2012

**ಪ್ರಸ್ತಾವನೆ:**

ಶ್ರೀ ಅಡೆಪ್ಪ ಬನ್ನಿ, ಇವರು ಬೀದರ್ ಜಿಲ್ಲೆಯ ಧನ್ನೂರಾ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ., ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ನೀವು ದಿನಾಂಕ: 22–9–09 ರಂದು ಧನ್ನೂರಾ ಪೊಲೀಸ್ ಠಾಣೆ ಗುನ್ನೆ ನಂ. 186/09 ಕಲಂ 279, 337,338, 304(ಎ) ಐ.ಪಿ.ಸಿ. ಸಾ.ವ 187 ಐ.ಎಮ್.ವಿ. ಎಕ್ಟ ನೇದ್ದರ ಘಟನೆಯ ಮಾಹಿತಿಯನ್ನು ಸ್ವೀಕೃತವಾದ ಕೂಡಲೇ ನೀವು ಘಟನೆ ಸ್ಥಳಕ್ಕೆ ಬೇಟ್ಟಿ ನೀಡಿರುವಿರಿ. ನೀವು ಸ್ಥಳಕ್ಕೆ ಬೇಟ್ಟಿ ನೀಡಿದಾಗ ಗಾಯಾಳು ಶಂಕರ ತಂದೆ ನಾಗಪ್ಪಾ ಎಂಬಾತ ಆತನಿಗೆ ಆದ ಗಾಯಗಳಿಂದ ಒದ್ದಾಡುತ್ತಿದ್ದು ನೀವು ಕೂಡಲೇ ನಿಮಗೆ ಪೂರೈಸಿದ ಪೊಲೀಸ್ ಜೀಪನಲ್ಲಿ ಚಿಕಿತ್ಸೆಗಾಗಿ ಕೂಡಲೇ ಆಸ್ಪತ್ರೆಗೆ ದಾಖಲಾಯಿಸಲು ವಿಫಲರಾಗಿ ನೀವು ಗಾಯಾಳುವಿನ ಸಂಬಂಧಿಕರಿಗೆ ಗಾಯಾಳುವಿನಿಗೆ ಚಿಕಿತ್ಸೆಗಾಗಿ ಸಾಗಿಸಲು ಬೇರೆ ವಾಹನ ತರುವಂತೆ ಹೇಳಿ ಕಳುಹಿಸಿ ವಿನಾಃ ಕಾರಣ ಕಾಲಹರಣ ಮಾಡಿರುವುದರಿಂದ ಸದರಿ ಗಾಯಾಳು ಘಟನೆ ಸ್ಥಳದಲ್ಲಿ ಮೃತಪಟ್ಟಿರುತ್ತಾನೆ. ನಿಮ್ಮ ಈ ನಿಷ್ಕಾಳಜಿತನಕ್ಕೆ ಕುಪಿತರಾದ ಗ್ರಾಮಸ್ಥರು ಕಾನೂನು ಸುವ್ಯವಸ್ಥೆ ಹದಗೆಡಿಸುವ ಹಂತಕ್ಕೆ ತಲುಪಿದ್ದು ಇರುತ್ತದೆ. ನೀವು ಈ ರೀತಿ ಮಾಡಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ಇರುತ್ತದೆ. ನೀವು ಈ ರೀತಿ ಮಾಡಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಮತ್ತು ಬೇಜವಾಬ್ದಾರಿತನ ಪ್ರದರ್ಶಿಸಿ ಒಬ್ಬ ಗಾಯಾಳುವಿನ ಪ್ರಾಣ ರಕ್ಷಿಸುವಲ್ಲಿ ಉದಾಸೀನತೆ ವಹಿಸಿ ಗಂಭೀರ ಲೋಪ ಎಸಗಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 18–4–2011ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರುವಂತೆ ಎರಡು ವರ್ಷಗಳ ಕಾಲ ಮುಂದೂಡಲಾಗಿದೆ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 14–12–2011ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಇವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಒಂದು ವರ್ಷ ಕಾಲ ಮುಂದೂಡಲಾಗಿದೆ. ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಅತೀವ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 37 ಪೊಸಿಅ 2012 ಬೆಂಗಳೂರು, ದಿನಾಂಕ: 07–11–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಅಡೆಪ್ಪ ಬನ್ನಿ, ಪಿ.ಎಸ್.ಐ., ಕೊಂಚಾವರಂ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

P.R. 293

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಪಿ.ಬಿ. ನೀಲಗಾರ, ಪಿ.ಎಸ್.ಐ., ನೇಸರಗಿ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರ ಆದೇಶ ಸಂಖ್ಯೆ: ಸಿಬ್ಬಂದಿ-2/ಇವಿ/16/2010 (ಆ.ಪು. ಸಂಖ್ಯೆ: 731/2011) ದಿನಾಂಕ: 26-8-2011
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು/01/2010-11 ದಿನಾಂಕ: 02-01-2012
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 05-5-2012
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2)13/2012-13 ದಿನಾಂಕ: 09-8-2012

**ಪ್ರಸ್ತಾವನೆ:**

ಶ್ರೀ ಪಿ.ಬಿ. ನೀಲಗಾರ, ಪಿ.ಎಸ್.ಐ., ಇವರು ಬೆಳಗಾಂ ಜಿಲ್ಲೆಯ ರಾಯಬಾಗ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಮತ್ತು ಕರ್ತವ್ಯ ಲೋಪವೆಸಗಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:-**

"ಆಪಾದಿತ ಪೊಲೀಸ್ ಅಧಿಕಾರಿಯಾದ ನೀವು ಈ ಹಿಂದೆ ರಾಯಬಾಗ ಪೊಲೀಸ್ ಠಾಣೆಯಲ್ಲಿ ಪಿ.ಎಸ್.ಐ. ಎಂದು ಕರ್ತವ್ಯ ನಿರ್ವಹಿಸುತ್ತಿದ್ದೀರಿ. ಆ ವೇಳೆಯಲ್ಲಿ ನೀವು ನಿಮ್ಮ ಠಾಣಾ ಸರಹದ್ದಿನಲ್ಲಿ ಸಮರ್ಪಕವಾಗಿ ಕರ್ತವ್ಯ ನಿರ್ವಹಿಸದೇ ಇದ್ದು, ಇದರಲ್ಲಿ ಮಟಕಾ ಮತ್ತು ಜೂಜಾಟ ನಡೆಸುವವರಿಗೆ ಕುಮ್ಮಕ್ಕು ನೀಡಿ ಕಾನೂನು ಬಾಹಿರ ಚಟುವಟಿಕೆಗಳನ್ನು ಸಂಪೂರ್ಣವಾಗಿ ಹತ್ತಿಕ್ಕುವಲ್ಲಿ ವಿಫಲರಾಗಿರುತ್ತೀರಿ.

ಇದಕ್ಕೆ ಪೂರಕವಾಗಿ ಜಿಲ್ಲಾ ಡಿ.ಸಿ.ಬಿ.ಐ. ಪಿ.ಎಸ್.ಐ. ರವರು ತಮ್ಮ ತಂಡದೊಂದಿಗೆ ರಾಯಬಾಗ ಠಾಣಾ ವ್ಯಾಪ್ತಿಯ ಜಲಾಲಪೂರ ಗ್ರಾಮದಲ್ಲಿ ದಿ: 11-6-2010 ರಂದು ದಾಳಿ ಮಾಡಿರುತ್ತಾರೆ. ಈ ವೇಳೆಯಲ್ಲಿ ಅವರು ಮಟಕಾ ಜೂಜಾಟದಲ್ಲಿ ನಿರತರಾಗಿದ್ದ ಆರೋಪಿತರಾದ ಲಕ್ಷ್ಮಣ ವಿಠ್ಠೊಬಾ ಕಾಂಬಳಿ ಮತ್ತು ಇತರರನ್ನು ದಸ್ತಗಿರಿ ಮಾಡಿ ರೂ.1920/- ಹಣ ಹಾಗೂ ಮೊಬೈಲ್‌ಗಳನ್ನು ಜಪ್ತ ಮಾಡಿರುತ್ತಾರೆ. ಈ ಪ್ರಕರಣದ ಗುನ್ಹಾ ಸಂಖ್ಯೆ: 154/10 ಕಲಂ 78(3) ಕೆ.ಪಿ. ಕಾಯ್ದೆ ರೀತ್ಯ ದಾಖಲು ಮಾಡಿ ತನಿಖೆ ಕೈಗೊಳ್ಳಲಾಗಿದೆ.

ನಂತರ ಚಿಕ್ಕೋಡಿ ಡಿವೈ.ಎಸ್.ಪಿ. ರವರು ದಿ: 22-6-2010 ರಂದು ತಮ್ಮ ತಂಡದೊಂದಿಗೆ ರಾಯಬಾಗ ಠಾಣಾ ವ್ಯಾಪ್ತಿಯ ಬಾವಾನ ಸವದತ್ತಿ ಗ್ರಾಮದಲ್ಲಿ ದಾಳಿ ಮಾಡಿರುತ್ತಾರೆ. ಆ ವೇಳೆಯಲ್ಲಿ ಅವರು ಮಟಕಾ ಜೂಜಾಟದಲ್ಲಿ ನಿರತರಾಗಿದ್ದ ಆರೋಪಿತರಾದ ಶಬ್ಬೀರ ಅಲ್ಲಾಭಕ್ಷ ಗೌಂಡಿ ಎಂಬುವನ ಮನೆಯಲ್ಲಿ ಶೋಧಿಸಿದಾಗ ಆತನು ತನ್ನ ಕೈಯಲ್ಲಿದ್ದ ಓ.ಸಿ. ಚೀಟಿಗಳನ್ನು ಒಗೆದು, ಗೋಡೆ ಜಿಗಿದು ಓಡಿ ಹೋಗಿರುತ್ತಾನೆ. ಅವರ ಮನೆಯಲ್ಲಿ ಓ.ಸಿ. ಚೀಟಿ ಬರೆಯುತ್ತಿದ್ದ ವ್ಯಕ್ತಿಯನ್ನು ಹಿಡಿದು ವಿಚಾರಿಸಲಾಗಿ ಆತನು ಗಣಿ ತಂದೆ ಭಕ್ವಾಷೇಕ ಸಾ:ಇಚಲಕರಂಜಿ ಜಂಡಾ ಚೌಕ ಎಂದು ಹೇಳಿದ್ದು, ಆತನ ಬಳಿಯಿಂದ ಮನೆಯ ಒಳಗೆ ಸಿಕ್ಕಿದ ಓ.ಸಿ. ಚೀಟಿಗಳು, ನಗದು ಹಣ ರೂ. 38390/- ಹಣವನ್ನು ಪಂಚರ ಸಮಕ್ಷಮದಲ್ಲಿ ಅಮಾನತ್ತು ಪಡಿಸಿರುತ್ತಾರೆ. ಈ ಬಗ್ಗೆ ಈ ಪ್ರಕರಣದ ಗುನ್ಹಾ ಸಂಖ್ಯೆ: 171/10 ಕಲಂ 78(3) ಕೆ.ಪಿ. ಕಾಯ್ದೆ ರೀತ್ಯ ದಾಖಲು ಮಾಡಿ ತನಿಖೆ ಕೈಗೊಳ್ಳಲಾಗಿದೆ.

ಸದರಿ ಮೇಲ್ಕಂಡ ಆರೋಪಗಳ ಬಗ್ಗೆ ನಿಮಗೆ ಸಾಕಷ್ಟು ಬಾರಿ ಇಂತಹ ಕಾನೂನು ಚಟುವಟಿಕೆಗಳನ್ನು ಹತ್ತಿಕ್ಕುವಂತೆ ಮೇಲಾಧಿಕಾರಿಗಳು ಸೂಚಿಸಿದ್ದರೂ, ಈ ದಿಸೆಯಲ್ಲಿ ನೀವು ಯಾವುದೇ ಕಾನೂನು ಕ್ರಮ ಜರುಗಿಸಿರುವುದಿಲ್ಲ. ಹಾಗೂ ಆರೋಪಿತರ ಜೊತೆ ಶಾಮೀಲಾಗಿ ಕಾನೂನು ಬಾಹಿರ ಚಟುವಟಗಳನ್ನು ಹತ್ತಿಕ್ಕಲು ನಿಮ್ಮ ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಮತ್ತು ಕರ್ತವ್ಯ ಲೋಪವನ್ನು ವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆ.ಪೊ.ಅ. ರವರ ವಿರುದ್ಧದ ಆರೋಪ ಸಾಬಿತಾಗಿರುವುದಿಲ್ಲವೆಂದು ಅಭಿಪ್ರಾಯಪಟ್ಟಿದ್ದು, ಈ ಕೆಳಕಂಡ ಕಾರಣಗಳಿಂದ ಶಿಸ್ತು ಪ್ರಾಧಿಕಾರವು ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪಿರುವುದಿಲ್ಲ.

"ಅಭಿಯೋಗದ ಸಾಕ್ಷಿ ನಂ: 01 ಮತ್ತು 02 ಪಂಚ ಜನರು ಮತ್ತು ಅಭಿಯೋಗಪರ ಸಾಕ್ಷಿ 16 ರಿಂದ 29 ರವರೆಗಿನ ಸಾಕ್ಷಿದಾರರ ಹೇಳಿಕೆಯಲ್ಲಿ ರಾಯಬಾಗ ಠಾಣಾ ವ್ಯಾಪ್ತಿಯಲ್ಲಿ ಜೂಜಾಟ ಮತ್ತು ಮಟಕಾದಂತಹ ಕಾನೂನುಬಾಹಿರ ಚಟುವಟಿಕೆಗಳು ನಡೆದ ಬಗ್ಗೆ ಪುಷ್ಠೀಕರಿಸುವ ಸಾಕ್ಷಿಯನ್ನು ನುಡಿದಿರುತ್ತಾರೆ. ಅಲ್ಲದೆ ಅಭಿಯೋಗಪರ ದಾಖಲೆ ನಿಶಾನೆ-ಪಿ ಎಂದು ಗುರುತಿಸಿದ 11 ದಾಖಲೆಗಳನ್ನು ಪರಿಶೀಲಿಸಲಾಗಿ ಆಪಾದಿತರ ಮೇಲಿನ ಅಪಾದನೆ ದೃಡಪಡುತ್ತದೆ. ಆಪಾದಿತರು ಜೂಜಾಟ, ಮಟಕಾದಂತಹ ಕಾನೂನು ಬಾಹಿರ ಚಟುವಟಿಕೆಗಳನ್ನು ಹತ್ತಿಕ್ಕುವಲ್ಲಿ ವಿಫಲರಾಗಿದ್ದು ಕಂಡುಬರುವುದು. ಅಲ್ಲದೆ ಆಪಾದಿತರು ತಮ್ಮ ಪರವಾಗಿ ಹಾಜರುಪಡಿಸಿದ 06 ರಕ್ಷಣಾಪರ ಸಾಕ್ಷಿದಾರರು ಮತ್ತು 02 ರಕ್ಷಣಾಪರ ದಾಖಲೆಗಳನ್ನು ಪರಿಶೀಲಿಸಲಾಗಿ ರಕ್ಷಣಾಪರ ಸಾಕ್ಷಿದಾರ 37 ರವರು ನೀಡಿರುವ ಸಾಕ್ಷಿಯು ಅಪರಾಧ ಪ್ರಕರಣ ಸಂ:179/2010 ನೇದ್ದರಲ್ಲಿ ಆರೋಪಿತನ ತಾಯಿಯಾಗಿದ್ದು, ಆರೋಪಿಯು ಆತನ ತಾಯಿ ಪಡೆದ ಬ್ಯಾಂಕ್ ಸಾಲದ ಹಣ ಓ.ಸಿ. ಚೀಟಿಗಳನ್ನು ಬರೆಯುವ ಜಾಗದಲ್ಲಿ ದೊರೆತಿರುವುದಕ್ಕೂ ಸಂಬಂಧವಿರುವುದಿಲ್ಲ. ಏಕೆಂದರೆ

ಅವರಿಬ್ಬರೂ ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ಉದ್ಯೋಗದಲ್ಲಿರುತ್ತಾರೆ. ಕಾರಣ ಇಲಾಖಾ ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ನಾನು ಒಪ್ಪಿಕೊಳ್ಳದೇ ಆಪಾದಿತರ ಮೇಲಿನ ಆಪಾದನೆಗಳು ದೃಢಪಡುತ್ತವೆ ಎಂದು ತೀರ್ಮಾನಿಸಿದ್ದಾರೆ."

ಈ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 26–8–2011ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ಒಂದು ವರ್ಷ ಕಾಲ ಮುಂದೂಡಲಾಗಿದೆ ದಿನಾಂಕ: 25–6–2010 ರಿಂದ 09–12–2010ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 02–01–2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ಘೋರ ನಿಷ್ಕಾಳಜಿತನ ಮತ್ತು ಕರ್ತವ್ಯ ಲೋಪವೆಸಗಿರುವುದನ್ನು ಗಮನಿಸಲಾಗಿದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 47 ಪೊಸಿಅ 2012 ಬೆಂಗಳೂರು, ದಿನಾಂಕ: 18–01–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ಬಿ. ನೀಲಗಾರ, ಪಿ.ಎಸ್.ಐ., ನೇಸರಗಿ ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

P.R. 331

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಪಿ.ಕೆ. ಚೌಧರಿ, ಸಿ.ಪಿ.ಐ., ಕಾಳಗಿ ವೃತ್ತ, ಚಿತ್ತಾಪುರ, ಗುಲ್ಬರ್ಗಾ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: 194/2008 ಡಿ.ಓ.ಬಿ. ಸಂಖ್ಯೆ: 965/2008 ದಿನಾಂಕ: 21–11–2008
2) ಮೇಲ್ಮನವಿ ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಹಿಂಬರಹ ಸಂಖ್ಯೆ: ಅಪೀಲು/40/2009/ 1807 ದಿನಾಂಕ: 07–9–2009
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 20–12–2010
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬಿ(8)78/2010–11 ದಿನಾಂಕ: 16–7–2012 ಮತ್ತು 21–8–2012

**ಪ್ರಸ್ತಾವನೆ:**

ಶ್ರೀ ಪಿ.ಕೆ. ಚೌಧರಿ, ಸಿ.ಪಿ.ಐ., ಇವರು ಕಾಳಗಿ ವೃತ್ತದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ತನಿಖೆಯ ಕಾರ್ಯ ನಿರ್ವಹಿಸುವಲ್ಲಿ ಮೇಲಾಧಿಕಾರಿಗಳ ಸಲಹೆ ಸೂಚನೆಗಳನ್ನು ಪಾಲಿಸದೆ ದುರ್ನಡತೆ ಹಾಗೂ ಕಾರ್ಯ ವಿಮುಖತೆ ಪ್ರದರ್ಶಿಸಿರುವ ಕಾರಣ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 7 ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

" ಮಾಡಬೂಳ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ: 83/2007 ಕಲಂ ಹುಡುಗ ಕಾಣೆಯಾದ ಬಗ್ಗೆ ಪ್ರಕರಣದಲ್ಲಿ ಮುಂದಿನ ತನಿಖೆಯನ್ನು ನಿರ್ವಹಿಸಲು ಮೇಲಾಧಿಕಾರಿಗಳ ಸಲಹೆ ಸೂಚನೆಗಳನ್ನು ಪಾಲಿಸದೆ ದುರ್ನಡತೆ ಹಾಗೂ ಕಾರ್ಯ ವಿಮುಖತೆ ಪ್ರದರ್ಶಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 21–11–2008ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಆರು ತಿಂಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಯ ಮೇಲೆ ಪರಿಣಾಮ ಬೀರದಂತೆ ಮುಂದೂಡುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 07–9–2009ರ ಹಿಂಬರಹದಲ್ಲಿ ಮೇಲ್ಮನವಿಯನ್ನು ನಿಗದಿತ ಅವಧಿಯೊಳಗೆ ಸಲ್ಲಿಸದ ಕಾರಣ ತಿರಸ್ಕರಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ತನಿಖೆಯ ಕಾರ್ಯ ನಿರ್ವಹಿಸುವಲ್ಲಿ ಮೇಲಾಧಿಕಾರಿಗಳ ಸಲಹೆ ಸೂಚನೆಗಳನ್ನು ಪಾಲಿಸದೆ ದುರ್ನಡತೆ ಹಾಗೂ ಕಾರ್ಯ ವಿಮುಖತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 197 ಪೊಸಿಅ 2010 ಬೆಂಗಳೂರು, ದಿನಾಂಕ: 15–01–2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಪಿ.ಕೆ. ಚೌಧರಿ, ಸಿ.ಪಿ.ಐ., ಕಾಳಗಿ ವೃತ್ತ, ಚಿತ್ತಾಪುರ, ಗುಲ್ಬರ್ಗಾ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**P.R. 333**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ವಿ.ಎನ್. ಮಲ್ಲಿಕಾರ್ಜುನ, ಅನುಯಾಯಿ (ನಿವೃತ್ತ) ಸಂ.31 'ಎ' ದಳ, 7ನೇ ಪಡೆ, ಕ.ರಾ.ಮೀ.ಪೊ., ಮಂಗಳೂರು, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ.

**ಓದಲಾಗಿದೆ:**
1) ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್, 7ನೇ ಪಡೆ, ಮಂಗಳೂರು, ಇವರ ಆದೇಶ ಸಂಖ್ಯೆ: 7/ಇವಿ.6/2008–09 (ಓ.ಬಿ. ಸಂಖ್ಯೆ: 231/ 2009–10) ದಿನಾಂಕ: 02–3–2010
2) ಮೇಲ್ಮನವಿ ಪ್ರಾಧಿಕಾರ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಅಪೀಲು/01/2010–11 ದಿನಾಂಕ: 20–11–2010
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 04–4–2011
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)7/2011–12 ದಿನಾಂಕ: 11–8–2011 ಮತ್ತು 13–7–2012

**ಪ್ರಸ್ತಾವನೆ:**

ಶ್ರೀ ವಿ.ಎನ್. ಮಲ್ಲಿಕಾರ್ಜುನ, ಇವರು ಕೆ.ಸಿ.ಎಸ್.ಆರ್.ಪಿ.ಯ 7ನೇ ಪಡೆ, ಮಂಗಳೂರಿನಲ್ಲಿ ಅನುಯಾಯಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ದುರ್ನಡತೆ, ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

1. "ಶ್ರೀ ವಿ.ಎನ್. ಮಲ್ಲಿಕಾರ್ಜುನ, ಅನು ಸಂ.31 'ಎ' ದಳ, 7ನೇ ಪಡೆ, ಕರಾಮೀಪೊ, ಮಂಗಳೂರು, ಆದ ನೀವು ದಿನಾಂಕ: 15–8–08 ರಂದು ಪಡೆಯ ನಿಸ್ತಂತು ವಿಭಾಗದಲ್ಲಿ ಕರ್ತವ್ಯದಲ್ಲಿದ್ದ ಪಿ.ಸಿ. 146, ಶ್ರೀ ಶೇಖರ ದೇವಾಡಿಗ ಹಾಗೂ ಪಡೆಯ ಕರ್ತವ್ಯಾಧಿಕರಿಯಾಗಿದ್ದ ಶ್ರೀ ಎಂ.ಟಿ. ಬೋಪಯ್ಯ, ಹೆಚ್.ಸಿ. 51 ರವರಿಗೆ ಅನಾಮಧೇಯ ದೂರವಾಣಿ ಕರೆ ಮಾಡಿ ಅವಾಚ್ಯ ಶಬ್ದಗಳಿಂದ ನಿಂದಿಸಿ, ಬೆದರಿಕೆಯೊಡ್ಡಿ, ದುರ್ನಡತೆ ಮತ್ತು ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ."
2. "ಆ.ಪೊ.ಅ. ಶ್ರೀ ವಿ.ಎಸ್. ಮಲ್ಲಿಕಾರ್ಜುನ, ಅನು ಸಂ.31 'ಎ' ದಳ, ಕರಾಮೀಪೊ, 7ನೇ ಪಡೆ, ಮಂಗಳೂರು, ಆದ ನೀವು ದಿನಾಂಕ: 09–9–08 ರಿಂದ 29–12–08 ರವರೆಗೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿಯಾಗಿ ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ನೀವು ತೀವ್ರತರಹದ ಕರ್ತವ್ಯ ನಿರ್ಲಕ್ಷ್ಯತೆ, ಬೇಜವಾಬ್ದಾರಿ, ದುರ್ನಡತೆ ಮತ್ತು ಅಶಿಸ್ತನ್ನು ಪ್ರದರ್ಶಿಸಿರುತ್ತೀರಿ."
3. "ನೀವು ರಜೆ ಮೀರಿ ಕರ್ತವ್ಯಕ್ಕೆ ಗೈರುಹಾಜರಿಯಲ್ಲಿ ಮುಂದುವರಿಯುತ್ತಿದ್ದಾಗ ನಿಯಮಾವಳಿಯಂತೆ ಈ ಕಛೇರಿಯಿಂದ ಹೊರಡಿಸಲಾದ ಕರ್ತವ್ಯ ಪರಿತ್ಯಾಗ ಪತ್ರವನ್ನು ಹಾಗೂ ಜ್ಞಾಪನಗಳನ್ನು ಕ್ರಮವಾಗಿ ದಿನಾಂಕ: 18–10–08, 16–11–08 ಹಾಗೂ 24–12–08 ರಂದು ಖುದ್ದಾಗಿ ಸ್ವೀಕರಿಸಿಕೊಂಡಿದ್ದರೂ ನಿಗದಿತ ಕಾಲಾವಕಾಶದೊಳಗೆ ಕರ್ತವ್ಯಕ್ಕೆ ಹಾಜರಾಗದೆ ಮೇಲಾಧಿಕಾರಿಗಳ ಆದೇಶ ಮತ್ತು ಸೂಚನೆಗಳನ್ನು ಪಾಲಿಸದೆ, ಅಶಿಸ್ತು, ದುರ್ನಡತೆ, ಬೇಜವಾಬ್ದಾರಿತನ ಮತ್ತು ಕರ್ತವ್ಯ ನಿರ್ಲಕ್ಷ್ಯತನವನ್ನು ಪ್ರದರ್ಶಿಸಿರುತ್ತೀರಿ."
4. ದಿನಾಂಕ: 05–02–09 ರಂದು ಸಮಯ ಸುಮಾರು 2100 ಘಂಟೆಗೆ ಅಸೈಗೋಳಿ ಪೊಲೀಸ್ ವಸತಿಗೃಹ ಸಂಕೀರ್ಣದಲ್ಲಿ ಶ್ರೀ ಪುರುಷೋತ್ತಮ ಎಚ್.ಸಿ. 82 ಹಾಗೂ ಅವರ ಪತ್ನಿಯವರಿಗೆ ಅಲ್ಲದೆ ಶ್ರೀ ಎಸ್.ಬಿ. ಚಿಪ್ಕರ್, ಪಿ.ಸಿ. 172, ರವರಿಗೆ ಅವಾಚ್ಯ

ಶಬ್ದಗಳಿಂದ ನಿಂದಿಸಿ ಜಗಳವಾಡಿ ವಸತಿಗೃಹ ಸಂಕೀರ್ಣದಲ್ಲಿ ಅಶಾಂತಿ ಉಂಟು ಮಾಡಿ ದುರ್ನಡತೆ ಮತ್ತು ಅಶಿಸ್ತನ್ನು ಪ್ರದರ್ಶಿಸಿರುವಿರಿ."

5. "ದಿನಾಂಕ: 07-02-09 ರಂದು ಸಮಯ ಸುಮಾರು 1100 ಘಂಟೆಗೆ ಪಡೆಯ ಆಡಳಿತ ಕಛೇರಿಯಲ್ಲಿ ಕಛೇರಿ ಕೆಲಸದ ಸಮಯದಲ್ಲಿ ಏರುಧ್ವನಿಯಲ್ಲಿ ಕೂಗಾಡುತ್ತಾ ಕಛೇರಿ ಕೆಲಸ ಕಾರ್ಯಗಳಿಗೆ ತೊಂದರೆಯುಂಟು ಮಾಡಿ ಅಶಿಸ್ತು ಮತ್ತು ದುರ್ನಡತೆಯನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಕಮಾಂಡೆಂಟ್, 7ನೇ ಪಡೆ, ಮಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 02-3-2010ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲಾಗಿದೆ, ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾದ ದಿನಾಂಕ: 09-9-08 ರಿಂದ 29-12-2008ರ ವರೆಗಿನ ಅವಧಿಯನ್ನು ವೇತನ ರಹಿತ ರಜೆಯೆಂದು ಪರಿಗಣಿಸುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆ.ಎಸ್.ಆರ್.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 20-11-2010ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ದುರ್ನಡತೆ, ಬೇಜವಾಬ್ದಾರಿತನ ಹಾಗೂ ಅಶಿಸ್ತು ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 39 ಪೊಸಿಅ 2011 ಬೆಂಗಳೂರು, ದಿನಾಂಕ: 15-01-2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ.ಎನ್. ಮಲ್ಲಿಕಾರ್ಜುನ, ಅನುಯಾಯಿ (ನಿವೃತ್ತ) ಸಂ.31 'ಎ' ದಳ, 7ನೇ ಪಡೆ, ಕ.ರಾ.ಮೀ.ಪೊ., ಮಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**P.R. 334**

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಪಿ. ಕೆ. ಮಂಜೇಗೌಡ, ಪ್ರಥಮ ದರ್ಜೆ ಸಹಾಯಕ, ಉಪ ಖಜಾನೆ, ಹೊಳೆನರಸೀಪುರ ಇವರ ಮೇಲಿನ ಟ್ರ್ಯಾಪ್ ಪ್ರಕರಣದ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ :** ಉಪ ನಿಬಂಧಕರು ವಿಚಾರಣೆಗಳು-I ಮತ್ತು ಮಾನ್ಯ ಕರ್ನಾಟಕ ಉಪ ಲೋಕಾಯುಕ್ತರು-II, ಬೆಂಗಳೂರು ಇವರ ವರದಿ ಪತ್ರ ಸಂ. Compt/uplok/MYS/2309/2012/DRE-1 dated: 11-02-2013 ಮತ್ತು 07-02-2013.

**ಪ್ರಸ್ತಾವನೆ:**

ಉಪ ನಿಬಂಧಕರು, ವಿಚಾರಣೆಗಳು-I, ಕರ್ನಾಟಕ ಲೋಕಾಯುಕ್ತ ಇವರು ಮೇಲೆ ಓದಲಾದ ದಿ : 11-02-2013ರ ಪತ್ರದೊಂದಿಗೆ ಕಳುಹಿಸಿರುವ ಕರ್ನಾಟಕ ಉಪ ಲೋಕಾಯುಕ್ತರು-II ರವರ ದಿನಾಂಕ : 07-02-2013 ವರದಿಯಲ್ಲಿ ಶ್ರೀ ಪಿ.ಕೆ. ಮಂಜೇಗೌಡ, ಪ್ರಥಮ ದರ್ಜೆ ಸಹಾಯಕ, ಉಪ ಖಜಾನೆ, ಹೊಳೆನರಸೀಪುರ ಇವರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಗಂಗಾಧರ. ಕೆ.ಪಿ. ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಹೊಳೆನರಸೀಪುರ ಇವರ ಗಳಿಕೆ ರಜೆ ನಗದೀಕರಣ ಬಿಲ್ಲಿನ ಪಾವತಿಯ ಸಂಬಂಧವಾಗಿ ಇವರಿಂದ ದಿನಾಂಕ : 05-08-2010ರಂದು ರೂ. 1000/-ಲಂಚ ಪಡೆಯುವ ಸಮಯದಲ್ಲಿ ಲೋಕಾಯುಕ್ತ ಪೊಲೀಸರ ಬಲೆಗೆ ಸಿಲುಕಿದ್ದು, ಈ ಬಗ್ಗೆ ನಡೆದ ಮುಂದಿನ ತನಿಖೆಯಿಂದಾಗಿ ಸಂಗ್ರಹವಾಗಿರುವ ಸಂಗತಿಗಳು, ಮಾಹಿತಿ, ದಾಖಲೆಗಳ ಆಧಾರಗಳಿಂದ ಸದರಿ ನೌಕರರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3(1)ರಡಿಯಲ್ಲಿ ಉಕ್ತವಾದ ದುರ್ನಡತೆ ಎಸಗಿರುವುದು ಮೇಲ್ನೋಟಕ್ಕೆ ಸ್ಥಿರಪಟ್ಟಿದ್ದು ಸದರಿ ದುರ್ನಡತೆ ಸಂಬಂಧದಲ್ಲಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14-ಎ ರನ್ವಯ ಪ್ರಕರಣವನ್ನು ಉಪ ಲೋಕಾಯುಕ್ತರು-IIಕ್ಕೆ ವಹಿಸುವಂತೆ ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಪ್ರಕರಣವನ್ನು ಪೂರ್ಣ ಪ್ರಮಾಣದ ವಿಚಾರಣೆಗಾಗಿ ಸನ್ಮಾನ್ಯ ಉಪ ಲೋಕಾಯುಕ್ತರು-II ಅವರಿಗೆ ವಹಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 35 ಆಖಇ 2013, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14-ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಪಿ.ಕೆ. ಮಂಜೇಗೌಡ, ಪ್ರಥಮ ದರ್ಜೆ ಸಹಾಯಕ,

ಉಪ ಖಜಾನೆ, ಹೊಳೆನರಸೀಪುರ ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ವಿಚಾರಣೆಯನ್ನು ಗೌರವಾನ್ವಿತ ಉಪ ಲೋಕಾಯುಕ್ತರು–II ಅವರ ಮೂಲಕ ನಡೆಯಬೇಕೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಲಕ್ಷ್ಮಣ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

**P.R. 441**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಭಾರತ ಸಂವಿಧಾನದ ಅನುಚ್ಛೇದ 371ರ ತಿದ್ದುಪಡಿ ನಿರೀಕ್ಷಿಸಿ ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಪ್ರಾದೇಶಿಕ ಅಭಿವೃದ್ಧಿ ಮತ್ತು ಮೀಸಲಾತಿ ವಿಷಯಗಳಿಗಾಗಿ ಕರಡು ಕ್ರಿಯಾಯೋಜನೆ ಹಾಗೂ ಮಾರ್ಗಸೂಚಿ ಸಿದ್ಧಪಡಿಸಿ ಸಚಿವಸಂಪುಟ ಉಪಸಮಿತಿಗೆ ಮಂಡಿಸಲು ಉನ್ನತಾಧಿಕಾರಿಗಳ ಸಮಿತಿಯನ್ನು ರಚಿಸುವ ಕುರಿತು.

**ಪ್ರಸ್ತಾವನೆ:**

ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಪ್ರಾದೇಶಿಕ ಅಭಿವೃದ್ಧಿ ಮತ್ತು ಮೀಸಲಾತಿಗೆ ಸಂಬಂಧಿಸಿದಂತೆ ಸಂಸತ್‌ನಲ್ಲಿ ಭಾರತ ಸಂವಿಧಾನದ (118ನೇ ತಿದ್ದುಪಡಿ) ವಿಧೇಯಕ, 2012 ಅನ್ನು ಮಂಡಿಸಿದ್ದು ಪರಿಗಣನೆಗೆ ಬಾಕಿ ಇರುತ್ತದೆ. ಸದರಿ ವಿಧೇಯಕವನ್ನು ಪರಿಗಣಿಸಿ ಅನುಚ್ಛೇದ 371–ಜೆ ಇದನ್ನು ಸೇರ್ಪಡಿಸಿದ ಕೂಡಲೇ ಇದರಿಂದಾಗಿ ಲಭ್ಯವಾಗುವ ಸೌಲಭ್ಯ ಮತ್ತು ಸವಲತ್ತುಗಳನ್ನು ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಜನರಿಗೆ ತಕ್ಷಣವೇ ದೊರಕುವಂತೆ ಮಾಡಲು ತತ್ಸಂಬಂಧ ವಿವಿಧ ವಿಷಯಗಳ ಕುರಿತು ಕರಡು ಆದೇಶ ಇತ್ಯಾದಿಗಳನ್ನು ಸಿದ್ಧಪಡಿಸಿ ಈ ಕುರಿತಂತೆ ರಚಿಸಲಾಗುವ ಸಚಿವ ಸಂಪುಟ ಉಪ ಸಮಿತಿಯ ಮುಂದೆ ಮಂಡಿಸುವ ನಿಮಿತ್ತ ಉನ್ನತಾಧಿಕಾರಿಗಳ ಸಮಿತಿಯನ್ನು ರಚಿಸುವ ಕುರಿತು ಪರಿಶೀಲಿಸಿದ್ದು ಈ ಕೆಳಗೆ ಸೂಚಿಸಿದಂತೆ ಆದೇಶಿಸಲಾಗಿದೆ

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 03 ರಾಕಾವ್ಯ 2010, ಬೆಂಗಳೂರು, ದಿನಾಂಕ: 07ನೇ ನವೆಂಬರ್, 2012.**

ಭಾರತ ಸಂವಿಧಾನದ (118ನೇ ತಿದ್ದುಪಡಿ) ವಿಧೇಯಕ 2012ಕ್ಕೆ ಸಂಸತ್ತಿನ ಅನುಮೋದನೆಗೆ ಬಾಕಿ ಇರಿಸಿ ಹಾಗೂ ಅನುಮೋದಿಸಿದ ಕೂಡಲೇ ಸರ್ಕಾರದಲ್ಲಿ ಮತ್ತು ಸ್ಥಾನಿಕ ಸಂಸ್ಥೆಗಳಲ್ಲಿ ಮಾಡುವ ನೇಮಕಾತಿಗಳಲ್ಲಿ ಮತ್ತು ವಿಶ್ವವಿದ್ಯಾನಿಲಯ ಹಾಗೂ ಇತರ ಶಿಕ್ಷಣ ಸಂಸ್ಥೆಗಳ ಪ್ರವೇಶದಲ್ಲಿ ಹಾಗೂ ಇತರ ವಿಷಯಗಳಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶದ ಅಸಮತೋಲನವನ್ನು ನಿವಾರಿಸುವ ಸಲುವಾಗಿ ಪ್ರದೇಶವಾರು ಮೀಸಲಾತಿ ನೀಡುವ ಕುರಿತು ಅವಶ್ಯಕ ಕರಡು ಆದೇಶ ಇತ್ಯಾದಿಯನ್ನು ಸಿದ್ಧಪಡಿಸಿ ಸಚಿವ ಸಂಪುಟ ಉಪ ಸಮಿತಿಗೆ ಮಂಡಿಸುವ ನಿಮಿತ್ತ ಈ ಕೆಳಗೆ ಸೂಚಿಸಿದ ಉನ್ನತಾಧಿಕಾರಿಗಳ ಸಮಿತಿಯನ್ನು ರಚಿಸಲಾಗಿದೆ.

| | | | |
|---|---|---|---|
| 1) | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ | .... | ಅಧ್ಯಕ್ಷರು |
| 2) | ಸರ್ಕಾರದ ಪ್ರಧಾನ ಕಾರ್ಯದರ್ಶಿ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ | .... | ಸದಸ್ಯರು |
| 3) | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | .... | ಸದಸ್ಯರು |
| 4) | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ | .... | ಸದಸ್ಯರು |
| 5) | ಸರ್ಕಾರದ ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ. | .... | ಸದಸ್ಯರು |

1. ಸಮಿತಿಯು ಸೂಚಿಸುವ ಎಲ್ಲಾ ಮಾಹಿತಿಯನ್ನು ವಿವಿಧ ಇಲಾಖೆ/ಪ್ರಾಧಿಕಾರಗಳು ನಿಗದಿಪಡಿಸುವ ಕಾಲ ಮಿತಿಯೊಳಗೆ ಸಲ್ಲಿಸತಕ್ಕದ್ದು.
2. ಆಂಧ್ರಪ್ರದೇಶ, ಮಹಾರಾಷ್ಟ್ರ, ಗುಜರಾತ್ ರಾಜ್ಯಗಳಿಗೆ ಸಂಬಂಧಿಸಿದಂತೆ, ಭಾರತ ಸಂವಿಧಾನದಡಿಯಲ್ಲಿ ಮೀಸಲಾತಿ ಶಿಕ್ಷಣ ಇತ್ಯಾದಿಗಳನ್ನು ಕಲ್ಪಿಸಿರುವ ಉಪಬಂಧದ ತತ್ಪರಿಣಾಮ ಹೊರಡಿಸಲಾಗಿರುವ ಆದೇಶ ಮತ್ತು ಅನುಷ್ಠಾನದಲ್ಲಿ ಸಂಭವಿಸಿರುವ ಲೋಪದೋಷದ ಕುರಿತು ಅವಶ್ಯವಿದ್ದಡೆ ಪ್ರವಾಸ ಮಾಡಿ ಅಧ್ಯಯನ ಮಾಡತಕ್ಕದ್ದು.
3. ಸಮಿತಿಯು ಎಲ್ಲಾ ಅಂಶಗಳನ್ನು ಪರಿಶೀಲಿಸಿ ಅವಶ್ಯವಾದ ಕರಡು ಆದೇಶಗಳನ್ನು ಸಿದ್ಧಪಡಿಸಿ ಸಚಿವ ಸಂಪುಟ ಉಪ ಸಮಿತಿಗೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶೈಲಜಾ ಡಿ. ಬೋರ್ಕರ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜಕೀಯ)

**P.R. 430**

## FOREST, ECOLOGY AND ENVIRONMENT SECRETARIAT

**Sub :** Karnataka Sustainable Forest Management and Biodiversity Conservation Project under Externally Aided JICA II stage – Revision of financial targets and extension of the project period up to 2014-15-Approval of.

**Read :**
1) G.O. No. FEE 279 FAP 2003 dated : 23-05-2005
2) Letters No. D1/BUD/CR-50/12-13 dated : 27-07-2012 and 25-09-2012 of the Principal Chief Conservator of Forests (Head of Forest Force), Bangalore.

**Preamble :**

Principal Chief Conservator of Forests (Head of Forest Force) in his letters dated : 27-07-2012 and 25-09-2012 read at (2) above has informed that the Karnataka Sustainable Forest Management and Bio-diversity Conservation Project under JICA is being implemented as per the G.O. No. FEE 279 FAP 2003 dated : 23-05-2005 read at (1) above, Further, he states that the project cost is Rs. 745.00 Crores and period of the Project is from 2005-06 to 2012-13 and as per the MOU made with JICA agency 15.209 billion Yen is available for this project and 13.800 billion Yen is utilized up to March, 2012 and 1.398 billion Yen is under savings. There is a provision to get re-imbursement from JICA agency as per the rule 2(2) of Loan Agreement of the Project for the expenditure made for the committed works up to the end of 2014-15 from JBIC.

Further, to take up approved committed works under savings as mentioned above in the year 2013-14 like maintenance of plantation assests created under the project Rs. 11.652 Crores and Rs. 0.914 crores reimbursable amounts for the year 2014-15 are required and a provision of Rs. 17.450 Crores and Rs. 6.710 Crores have been made for an administrative works and honorary to forest motivators respectively for the years 2013-14 and 2014-15. Consequently, the total financial outlay of the project is enhanced from Rs. 745.00 crores to Rs. 841.494 crores. In order to complete all the project activities as per the MOU and those initiated later during the implementation of the project and further to avail of the savings that have become available due to stronger Yen against Rupee, the 9$^{th}$ empowered Committee meeting held under the Chairmanship of Additional Chief Secretary to Government of Karnataka on 20-01-2012 has given its approval for the revised estimate from Rs. 745.00 crores to Rs. 841.494 crores and revised project period from 2005-13 to 2005-15 for the works mentioned at Annexure-I & II enclosed.

The proposal of the Principal Chief Conservator of Forests (Head of Forest Force) has been examined, Hence, the following order.

**GOVERNMENT ORDER NO. FEE 180 FAP 2012, BAngalore, DATED 28$^{th}$ FEBRUARY, 2013**

In the Circumstances explained at preamble the Government is pleased to revise the project cost of JICA assisted Karnataka Sustainable Forest Management and Bio-diversity Conservation Project from Rs. 745.00 Crores to Rs. 841.494 crores and to revise the project period from 2005-13 to 2005-15 subject to following conditions :-

1. Revised project cost should be limited to the balance available in the relevant categories under the loan allocation of the captioned project.
2. The Project Authority may ensure that extension of the project period should not have additional interest implication.
3. The inherent risk of shortage of funds in the eventuality of unfavourable exchange rate may be taken care of while revising the cost of the project.
4. Any reallocation of any loan component should be with the concurrence of Finance Department.

This order issues with the concurrence of Finance Department vide its Note No. FD 1135 Exp-5/2012, dated: 05-02-2013.

By Order and in the Name of the Governor of Karnataka

**S. P. PATIL,**

Under Secretary to Government,

Forest, Ecology and Environment Department (Wild life and Planning)

## ANNEXURE-I to the G.O. FEE 180 FAP 2012, Dated : 28-02-2013

## ANNUAL PROGRAMME OF JICA ASSISTED KSFMBC PROJECT (EAP) FOR THE YEAR 2013-14

**(Rs. In lakhs)**

| Sl. No. | Components / Activities | Unit | Target | |
|---|---|---|---|---|
| | | | Physical | Financial |
| 1 | 2 | 3 | 4 | 5 |
| I | **AFFORESTATION** | | | |
| 1 | **Model-2-Assisted Natural Regeneration** | | | |
| a | 3$^{rd}$ year maintenance | Ha. | 15,780 | 317.178 |
| 2 | **Model-3-Planatations for Timber production** | | | |
| a | 3$^{rd}$ year maintenance | Ha. | 6,260 | 241.135 |
| c | 2$^{nd}$ year maintenance | Ha. | 10 | 0.385 |
| 3 | **Model-4-Plantations for Fuel Wood & Small Timber Production** | | | |
| a | 3$^{rd}$ year maintenance | Ha. | 13,481 | 469.139 |
| | **Sub Total** | | **35,531** | **1,027.837** |

| Sl. No. | Components / Activities | Unit | Target | |
|---|---|---|---|---|
| | | | Physical | Financial |
| 1 | 2 | 3 | 4 | 5 |
| II | SUPPORTING ACTIVITIES FOR FOREST MANGEMENT | | | |
| 1 | Maintenance of 6th year Clonal Seed Orchards | Ha. | 112 | 7,869 |
| 2 | Maintenance of 5th year Clonal Seed Orchards | Ha. | 127 | 10.560 |
| 3 | Maintenance of 4th year Clonal Seed Orchards | Ha. | 108 | 8.980 |
| 4 | Maintenance of 3th year Clonal Seed Orchards | Ha. | 29 | 2.962 |
| 5 | Maintenance of 2nd year Clonal Seed Orchards | Ha. | 6 | 0.688 |
| 6 | Maintenance of 1st year Clonal Seed Orchards | Ha. | - | - |
| 7 | Maintenance of 6th year Clonal Seed Orchards | Ha. | 197 | 11.268 |
| 8 | Maintenance of 5th year Seedling Seed Orchards | Ha. | 185 | 12.580 |
| 9 | Maintenance of 4th year Seedling Seed Orchards | Ha. | 136 | 9.248 |
| 10 | Maintenance of 3rd year Seedling Seed Orchards | Ha. | 16 | 1.488 |
| 11 | Maintenance of 2nd year Seedling Seed Orchards | Ha. | 214 | 21.229 |
| 12 | Maintenance of 1st year Seedling Seed Orchards | Ha. | - | - |
| 13 | Maintenance of 3rd year Seed Production Area (Non-Teak) | Ha. | - | - |
| 14 | Maintenance of 3rd year Seed Production Area (Teak) | Ha. | - | - |
| 15 | Maintenance of 6th year CMA / VMG | Ha. | 158.50 | 12.680 |
| 16 | Maintenance of 5th year CMA / VMG | Ha. | 145 | 13.775 |
| 17 | Maintenance of 4th year CMA / VMG | Ha. | 84 | 7.980 |
| 18 | Maintenance of 3rd year CMA / VMG | Ha. | - | - |
| 19 | Maintenance of 2nd year CMA / VMG | Ha. | 3 | 0.499 |
| 20 | Maintenance of 1st year CMA / VMG | Ha. | - | - |
| 21 | Maintenance of 3rd year Germ Plasm Bank | Ha. | 19 | 1.171 |
| 22 | Maintenance of 2nd year Germ Plasm Bank | Ha. | 4 | 0.314 |
| 23 | Maintenance of 1st year Species Trial Plot | Ha. | - | - |
| 24 | Maintenance of 3rd year Species Trial Plot | Ha. | 35 | 2.160 |
| 25 | Maintenance of 2nd year Species Trial Plot | Ha. | 154 | 12.335 |
| | **Sub Total** | | | **137.787** |
| **III** | **REPAIR, MAINTENANCE AND OFFICE EXPENSES (RMOE)** | **-** | **-** | **155.900** |
| **IV** | **Motivator's Honorarium** | | **1,009** | **423.780** |
| | **Grand Total** | | | **1,745.304** |

**S. P. PATIL,**
Under Secretary to Government,
Forest, Ecology and Environment Department (Wild Life Planning)

**ANNEXURE-II to the G.O. No. FEE 180 FAP 2012, Dated : 28-02-2013**

**ANNUAL PROGRAMME OF JICA ASSISTED KSFMBC PROJECT (EAP) FOR THE YEAR 2014-15**

**(Rs. In lakhs)**

| Sl. No. | Components / Activities | Unit | Target | |
|---|---|---|---|---|
| | | | Physical | Financial |
| 1 | 2 | 3 | 4 | 5 |
| I | AFFORESTATION | | | |
| 1 | Model-3-Plantations for Timber production | | | |
| a | 3rd year maintenance | Ha. | 10 | 0.385 |
| | **Sub Total** | | **-** | **0.385** |

| Sl. No. | Components / Activities | Unit | Target | |
|---|---|---|---|---|
| | | | Physical | Financial |
| 1 | 2 | 3 | 4 | 5 |
| **II** | **SUPPORTING ACTIVITIES FOR FOREST MANAGEMENT** | | | |
| 1 | Maintenance of 6th year Clonal Seed Orchards | Ha. | 127 | 8.923 |
| 2 | Maintenance of 5th year Clonal Seed Orchards | Ha. | 108 | 8.980 |
| 3 | Maintenance of 4th year Clonal Seed Orchards | Ha. | 29 | 2.411 |
| 4 | Maintenance of 3rd year Clonal Seed Orchards | Ha. | 6 | 0.613 |
| 5 | Maintenance of 2nd year Clonal Seed Orchards | Ha. | - | - |
| 6 | Maintenance of 1st year Clonal Seed Orchards | Ha. | - | - |
| 7 | Maintenance of 6th year Seedling Seed Orchards | Ha. | 185 | 10.582 |
| 8 | Maintenance of 5th year Seedling Seed Orchards | Ha. | 136 | 9.248 |
| 9 | Maintenance of 4th year Seedling Seed Orchards | Ha. | 16 | 1.088 |
| 10 | Maintenance of 3rd year Seedling Seed Orchards | Ha. | 214 | 19.902 |
| 11 | Maintenance of 6th year CMA / VMG | Ha. | 145 | 11.600 |
| 12 | Maintenance of 5th year CMA / VMG | Ha. | 84 | 7.980 |
| 13 | Maintenance of 4th year CMA / VMG | Ha. | - | - |
| 14 | Maintenance of 3rd year CMA / VMG | Ha. | 3 | 0.324 |
| 15 | Maintenance of 2nd year CMA / VMG | Ha. | - | - |
| 16 | Maintenance of 1st year CMA / VMG | Ha. | - | - |
| 17 | Maintenance of 3rd year Germ Plasm Bank | Ha. | 4 | 0.247 |
| 18 | Maintenance of 2nd year Germ Plasm Bank | Ha. | - | - |
| 19 | Maintenance of 1st year Species Trial Plot | Ha. | - | - |
| 20 | Maintenance of 3rd year Species Trial Plot | Ha. | 154 | 9.502 |
| 21 | Maintenance of 2nd year Species Trial Plot | Ha. | - | - |
| | **Sub Total** | | | **91.400** |
| **III** | **REPAIR, MAINTENANCE AND OFFICE EXPENSES (RMOE)** | **-** | **-** | **155.900** |
| **IV** | **Motivator's Honorarium** | | **1,009** | **423.780** |
| | **Grand Total** | | | **671.465** |

**S. P. PATIL,**
Under Secretary to Government,
Forest, Ecology and Environment Department (Wild Life and Planning)

**P.R. 436**

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮಾರತ್‌ಹಳ್ಳಿ ಗ್ರಾಮದ ಸ.ನಂ. 33ರಲ್ಲಿ 13–47 ಎ/ಗುಂ. ಜಮೀನಿನಲ್ಲಿ 6–00 ಎಕರೆ ಜಮೀನನ್ನು ಕರ್ನಾಟಕ ಕೊಳಚೆ ಅಭಿವೃದ್ಧಿ ಮಂಡಳಿಗೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ರವರ ಪತ್ರ ಸಂಖ್ಯೆ : ಎಲ್‌ಎನ್‌ಡಿ(ಪೂ): ಸಿ.ಆರ್ 76/2011–12 ದಿನಾಂಕ: 27–04–2012

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆರವರು ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮಾರತ್‌ಹಳ್ಳಿ ಗ್ರಾಮದ ಸ.ನಂ. 33ರ ಜಮೀನು ಮೂಲತಃ ಸರ್ಕಾರಿ ಮುಫತ್ ಕಾವಲ್ ಜಮೀನಾಗಿದ್ದು, ಒಟ್ಟು ವಿಸ್ತೀರ್ಣ 13–37 ಎ/ಗುಂ. ಪೈಕಿ 6–00 ಎಕರೆ ಜಮೀನನ್ನು ಬಡಜನರಿಗೆ ಮನೆಗಳನ್ನು ನಿರ್ಮಿಸಲು ಕರ್ನಾಟಕ ಕೊಳಚೆ ಅಭಿವೃದ್ಧಿ ಮಂಡಳಿಗೆ ಮಂಜೂರು ಮಾಡುವ ಕುರಿತು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಜಮೀನಿನಲ್ಲಿ ಯಾವುದೇ ಮರ ಮಾಲ್ಕಿ ಅಥವಾ ಕಟ್ಟಡಗಳು ಇರದೇ ಸಮತಟ್ಟಾದ ವಾಸಯೋಗ್ಯವಾದ ಜಮೀನಾಗಿದ್ದು, ಕರ್ನಾಟಕ ಭೂಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ)ರನ್ವಯ ಸದರಿ ಜಮೀನಿನ ಮಾರುಕಟ್ಟೆ ದರದ ಶೇ. 50 ರಷ್ಟು ವಿಧಿಸುವುದಕ್ಕೆ ವಿನಾಯಿತಿ ನೀಡಿ ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಗೆ ಮಂಜೂರು ಮಾಡಲು ಸರ್ಕಾರದ ಆದೇಶ ಕೋರಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 397 ಎಲ್‌ಜಿಬಿ 2012, ಬೆಂಗಳೂರು, ದಿನಾಂಕ: 12ನೇ ಮಾರ್ಚ್, 2013.**

ಬೆಂಗಳೂರು ಪೂರ್ವ ತಾಲ್ಲೂಕು, ವರ್ತೂರು ಹೋಬಳಿ, ಮಾರತ್‌ಹಳ್ಳಿ ಗ್ರಾಮದ ಸ.ನಂ. 33ರ 13–37 ಎ/ಗುಂ. ಮುಫತ್ ಕಾವಲ್ ಜಮೀನಿನ ಪೈಕಿ 6–00 ಎಕರೆ ಜಮೀನನ್ನು ಕರ್ನಾಟಕ ಭೂ ಕಂದಾಯ ಕಾಯ್ದೆ 1966ರ ನಿಯಮ 97(4)ರಡಿ ಗೋಮಾಳ ಶೀರ್ಷಿಕೆಯಿಂದ ತಗ್ಗಿಸಿ, **ರಾಜೀವ್ ಆವಾಸ್ ಯೋಜನೆಯಡಿ ಬಡಜನರಿಗೆ ಮನೆಗಳನ್ನು ನಿರ್ಮಿಸುವ ಸಲುವಾಗಿ ಮಾತ್ರ ಉಪಯೋಗಿಸುವ ಷರತ್ತಿಗೊಳಪಟ್ಟು** ಕರ್ನಾಟಕ ಭೂಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ)ರನ್ವಯ ಸದರಿ ಜಮೀನಿನ ಮಾರುಕಟ್ಟೆ ದರದ ಶೇ. 50ರಷ್ಟು ವಿಧಿಸುವುದಕ್ಕೆ ವಿನಾಯಿತಿ ನೀಡಿ, ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಕರ್ನಾಟಕ ಕೊಳಚೆ ಅಭಿವೃದ್ಧಿ ಮಂಡಳಿಗೆ ಮಂಜೂರು ಮಾಡಿದೆ.

**ಷರತ್ತುಗಳು :**

1. ಮಂಜೂರಾದ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪಗುತ್ತಿಗೆಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
6. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ, ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೆ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
7. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
8. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
9. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
10. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉಮಾದೇವಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಂಜೂರಾತಿ–1)

**P.R. 437**

## COMMERCE & INDUSTRIES SECRETARIAT

**Sub :** Market Development Assistance for sponsoring Trade and Industry Delegations to participate in International Trade Fairs / Exhibitions, B2B Meet etc., - Amendment – reg.

**Read :** Government Order No. CI 156 SPI 2011, dated 18-08-2011

**Preamble :**

Government of Karnataka is providing Market Development Assistance for the delegate who visits abroad for business promotion and trade fairs. The present Government order vide reference above stipulates the financial assistance of 75% of the airfare in economy class subject to a maximum of Rs. 75,000/- per delegate.

Many of the trade bodies and the industrialist / traders / exporters have expressed that the financial assistance under the scheme may be extended to meet the expenditure towards the stall rentals and TA / DA for their participation in the international and also domestic exhibitions.

Government of India agencies such as Department of Commerce, MSME, NSIC and other Export Promotion Councils are offering air fare, stall rentals and freight charges etc., under Market Development Assistance Scheme for promotion of

International trade. In order to encourage MSME Sectors of Karnataka to participate in the International Trade Fairs to showcase their strengths and displaying of innovative products, prototypes, models and literature etc., for business development. This would also provide them an excellent opportunities for establishing joint ventures, technology transfers, marketing and image building for MSMEs in foreign countries and there by earning substantial foreign exchange to the Country.

Considering all the above points, it is felt necessary to modify the existing MDA Guidelines, hence the Order:

**GOVERNMENT ORDER No. CI 63 SPI 2013, BANGALORE, DATED 15th MARCH, 2013**

1. MDA scheme shall be extended to delegates / members for their overseas visits at the rate of 75% of the airfare in economy class and subsidizing of stall rentals and TA / DA for maximum of 3 days @ $100 per day, subject to a maximum of RS. 75,000/- per delegate for their participation in International Trade Fairs / Exhibitions, B2B meets and Market Research etc.,
2. To extend MDA scheme to delegates / members for their participation in international exhibitions, trade fairs and B2B meets held within India at the rate of 75% of economy air fare and TA / DA of Rs. 3,000/- for 3 days subject to a maximum of Rs. 10,000/- per delegate. MSME participating in international trade fairs held in India by taking a stall may also be extended 50 % of stall rentals with a maximum cap of Rs. 25,000/- per unit.
3. Under reverse MDA scheme, financial assistance shall be extended towards economy air fare, stall rentals and TA / DA for 3 days @ $ 100 per day to Foreign Nationals / NRIs. Individuals and / or delegations who visits Karnataka for their participation in Exhibition / Trade Fairs, Business Meets and Market Research etc., subject to a maximum of Rs. 75,000/- per delegate.
4. **Conditions for eligibility :-**

   a) If the member is part of a delegation supported by State Govt./ VTPC and the expenditure towards local conveyance and B2B meetings are being arranged, then the members are eligible only for economy airfare and stall rental subject to maximum of 75% of economy air fare for his visits within or outside India subject to a maximum cap of Rs. 75,000/- per delegate.

   b) A company / unit is eligible under MDA scheme for a maximum of 4 times in its lifetime for overseas visits and within India separately.

   c) The company can avail the financial assistance under the scheme for visiting only one event in a particular country, only once in its lifetime and also any particular city only once within India in its lifetime.

   d) Journey days are not considered for extending TA / DA.

   e) The company / unit has to produce proof of stay at the location along with air travel (boarding pass) and visa stamped.

   f) A report of all business activities undertaken by the company / unit during its visit shall be submitted after completion of the visit.

   g) The department of Industries & Commerce and VTPC shall be the authority to select the finalist the industrial delegation.

   h) Each delegation shall not exceed 25 representatives of MSME Sectors.

   i) The Commerce & Industries Department to frame separate guidelines / criteria for selection of a delegate / company / firm etc.,

   j) The weightage be also given for selecting delegates from back ward districts.

   k) The Government and Department officials so selected to accompany the delegation for international fair will be screened by the screening committee as per the present guidelines of the DPAR orders of the concerned authority to depute shall be obtained.

The expenditure shall be met from the regular budgetary support and no additional funds should be sought for.

By Order and in the Name of the Governor of Karnataka

**SHIVASHANKAR NAIK L.**

Desk Officer (Technical Cell),

Commerce & Industries Department

**P.R. 438**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಇ–ಆಡಳಿತ ಮೂಲಸೌಕರ್ಯ ನಿರ್ವಹಣಾ ಸಮಿತಿ [e-Governance Infrastructure Management Committee (EGIMC)]ಯ ರಚನೆ.

**ಓದಲಾಗಿದೆ :**
1. ದಿನಾಂಕ : 31–12–1999ರ ಸರ್ಕಾರಿ ಆದೇಶ ಸಂಖ್ಯೆ : ಪಿಡಿ 121 ಸಿಎಸ್‌ಎಸ್ 97.
2. ದಿನಾಂಕ : 18–01–2000ರ ತಿದ್ದೋಲೆ ಸಂಖ್ಯೆ : ಪಿಡಿ 121 ಸಿಎಸ್‌ಎಸ್ 97
3. ದಿನಾಂಕ : 07–01–2005ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 39 ಇಜಿವಿ 2004.
4. ದಿನಾಂಕ : 15–02–2010ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 147 ಇಆಇ 2009.
5. ಕೇಂದ್ರ ಸರ್ಕಾರದ ಮಾಹಿತಿ ತಂತ್ರಜ್ಞಾನ ಇಲಾಖೆಯ ದಿನಾಂಕ : 17–08–2011ರ ಪತ್ರ ಸಂಖ್ಯೆ : 9(4)/2011–EGII ಮತ್ತು ಅದೇ ಸಂಖ್ಯೆಯ ದಿನಾಂಕ : 15–06–2012ರ ಪತ್ರ.
6. ಮುಖ್ಯ ನಿರ್ವಹಣಾಧಿಕಾರಿ, ಇ–ಆಡಳಿತ ಕೇಂದ್ರ, ಇವರ ದಿನಾಂಕ : 18–01–2013ರ ಪತ್ರ ಸಂಖ್ಯೆ: ಸಿಇಜಿ/32/ಎಸ್‌ಡಿಸಿ/2012.

**ಪ್ರಸ್ತಾವನೆ :**

1. ಸರ್ಕಾರಿ ಇಲಾಖೆ/ಸಂಸ್ಥೆಗಳ ಗಣಕೀಕರಣ/ಇ–ಆಡಳಿತಗೆ ಸಂಬಂಧಿಸಿದಂತೆ, ಇತರೆ ಕಾರ್ಯಗಳ ಜೊತೆಗೆ, ಈ ಕೆಳಕಂಡ ಕಾರ್ಯಗಳನ್ನು ನಿರ್ವಹಿಸುವ ಸಲುವಾಗಿ ವಿವಿಧ ಸಮಿತಿಗಳನ್ನು ರಚಿಸಲಾಗಿದೆ :–

1.1 ಗಣಕೀಕರಿಸುವುದು ಸಾಧ್ಯವಿರುವ ಕಾರ್ಯಕ್ಷೇತ್ರಗಳನ್ನು ಗುರುತಿಸುವುದು, ಸರ್ಕಾರಿ ಇಲಾಖೆಗಳ ಉಪಯೋಗಕ್ಕಾಗಿ ಗಣಕಯಂತ್ರಗಳನ್ನು ಸಂಗ್ರಹಿಸಲು ತಾಂತ್ರಿಕ ಅನುಮೋದನೆ ನೀಡುವುದು ಇತ್ಯಾದಿ.

1.2 ಸರ್ಕಾರಿ ಇಲಾಖೆಗಳಲ್ಲಿ ಹಾಗೂ ಸರ್ಕಾರಿ ಸಂಸ್ಥೆಗಳಲ್ಲಿ ಗಣಕೀಕರಣದ ಪ್ರಗತಿಯ ಉಸ್ತುವಾರಿ ಮಾಡುವುದು.

1.3 ರೂ. 10.00 ಲಕ್ಷಗಳಿಗಿಂತ ಕಡಿಮೆ ವೆಚ್ಚವಾಗುವ ವಿವಿಧ ಇಲಾಖೆಗಳ ವಾರ್ಷಿಕ ಇ–ಆಡಳಿತ ಕ್ರಿಯಾ ಯೋಜನೆಗಳನ್ನು ಪರಿಶೀಲಿಸುವುದು ಮತ್ತು ಅನುಮೋದಿಸುವುದು. [ರೂ. 10–00 (ಹತ್ತು) ಲಕ್ಷಗಳಿಗಿಂತ ಕಡಿಮೆ ವೆಚ್ಚವಾಗುವ ಸದರಿ ಮಿತಿಯನ್ನು, ಮೇಲೆ (4)ರಲ್ಲಿ ಓದಲಾದ ದಿನಾಂಕ : 15–02–2010ರ ಸರ್ಕಾರಿ ಆದೇಶದನ್ವಯ ರೂ. 1–00 (ಒಂದು) ಕೋಟಿವರೆಗೆ ಮತ್ತು ಅದಕ್ಕೆ ಸಮಾನ ವೆಚ್ಚವಾಗುವ ಮಿತಿಯನ್ನಾಗಿ ಮಾರ್ಪಡಿಸಲಾಗಿದೆ.]

1.4 ರೂ. 10–00 ಲಕ್ಷಗಳನ್ನು ಮೀರುವ ಇ–ಆಡಳಿತ ಯೋಜನೆಗಳಿಗೆ ಸಂಬಂಧಿಸಿದಂತೆ, ಮೇಲೆ 1.3ರಲ್ಲಿ ಉಲ್ಲೇಖಿಸಿದ ಕಾರ್ಯಗಳನ್ನು ನಿರ್ವಹಿಸುವುದು ಮತ್ತು ಆ ಯೋಜನೆಗಳ ಜಾರಿಗೊಳಿಸುವಿಕೆಯ ಪ್ರಗತಿಯನ್ನು ಪುನರ್ ಅವಲೋಕಿಸುವುದು. [ರೂ. 10–00 (ಹತ್ತು) ಲಕ್ಷಗಳು ಮೀರುವ ಸದರಿ ಮಿತಿಯನ್ನು ಮೇಲೆ (4)ರಲ್ಲಿ ಓದಲಾದ ದಿನಾಂಕ : 15–02–2010ರ ಸರ್ಕಾರಿ ಆದೇಶದನ್ವಯ ರೂ. 1–00 (ಒಂದು) ಕೋಟಿಗಿಂತ ಹೆಚ್ಚಿನ ವೆಚ್ಚವಾಗುವ ಮಿತಿಯನ್ನಾಗಿ ಮಾರ್ಪಡಿಸಲಾಗಿದೆ.)

2 ಮೇಲೆ (1)ರಲ್ಲಿ ಓದಲಾದ ದಿನಾಂಕ : 31–12–1999ರ ಸರ್ಕಾರಿ ಆದೇಶವನ್ನು, ಮೇಲೆ (2)ರಲ್ಲಿ ಓದಲಾದ ದಿನಾಂಕ : 18–01–2000ರ ತಿದ್ದೋಲೆಯೊಂದಿಗೆ ಓದಿಕೊಂಡಂತೆ, ಇವುಗಳ ಪ್ರಕಾರ, ಮೇಲೆ 1.1ರಲ್ಲಿ ಉಲ್ಲೇಖಿಸಿದ ಕಾರ್ಯವನ್ನು ಆಯಾಯ ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ರಚಿಸಲಾದ ತಾಂತ್ರಿಕ ಸಲಹಾ ಸಮಿತಿಗೆ ವಹಿಸಲಾಗಿದೆ. ದಿನಾಂಕ : 31–12–1999ರ ಸದರಿ ಆದೇಶದನ್ವಯ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಚಿಸಲಾದ ಸಮಿತಿಗೆ ಮೇಲೆ 1.2ರಲ್ಲಿ ಉಲ್ಲೇಖಿಸಿದ ಕಾರ್ಯವನ್ನು ವಹಿಸಲಾಗಿದೆ. ಮೇಲೆ (3)ರಲ್ಲಿ ಓದಲಾದ ದಿನಾಂಕ : 07–01–2005ರ ಸರ್ಕಾರಿ ಆದೇಶದನ್ವಯ, ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಇ–ಆಡಳಿತ), ಇವರ ಅಧ್ಯಕ್ಷತೆಯಲ್ಲಿ ರಚಿಸಲಾದ ಸಮಿತಿಗೆ ಮೇಲೆ 1.3ರಲ್ಲಿ ಉಲ್ಲೇಖಿಸಿದ ಕಾರ್ಯವನ್ನು ವಹಿಸಲಾಗಿದೆ. ದಿನಾಂಕ : 07–01–2005ರ ಸದರಿ ಆದೇಶದನ್ವಯ ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ರಚಿಸಲಾದ ಸಮಿತಿಗೆ ಮೇಲೆ 1.4ರಲ್ಲಿ ಉಲ್ಲೇಖಿಸಲಾದ ಕಾರ್ಯವನ್ನು ವಹಿಸಲಾಗಿದೆ.

3 ಮೇಲೆ (5)ರಲ್ಲಿ ಓದಲಾದ ಕೇಂದ್ರ ಸರ್ಕಾರದ ಮಾಹಿತಿ ತಂತ್ರಜ್ಞಾನ ಇಲಾಖೆಯ ದಿನಾಂಕ : 17–08–2011ರ ಪತ್ರ ಮತು ಅದೇ ಸಂಖ್ಯೆಯ ದಿನಾಂಕ: 15–06–2012ರ ಪತ್ರ, ಈ ಪತ್ರಗಳನ್ವಯ ಇ–ಆಡಳಿತ ಮೂಲಸೌಕರ್ಯ ನಿರ್ವಹಣಾ ಸಮಿತಿ [e-Government Infrastructure Management Committee (EGIMC)]ಯ ರಚನೆ ಮಾಡಲು ಸಲಹೆ ನೀಡಲಾಗಿದೆ. ಅದನ್ನು ಉಲ್ಲೇಖಿಸಿ, ಮುಖ್ಯ ನಿರ್ವಹಣಾಧಿಕಾರಿ, ಇ–ಆಡಳಿತ ಕೇಂದ್ರ, ಇವರು, ಮೇಲೆ (6)ರಲ್ಲಿ ಓದಲಾದ ದಿನಾಂಕ : 18–01–2013ರ ಅವರ ಪತ್ರದನ್ವಯ ಸಮಿತಿಯನ್ನು ರಚಿಸಲು ಹಾಗೂ ಅದಕ್ಕೆ ಈ ಕೆಳಗೆ ಉದ್ಧರಿಸಿದಂತೆ ಕಾರ್ಯಗಳನ್ನು ವಹಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ :–

(i) "To provide strategic policy level inputs on the management and usage of e-Governance infrastructure like SWAN, SDC, SSDG, CSC.

(ii) To ensure its high usage by line departments.

(iii) To establish uniform provisioning mechanisms,

(iv) To seek policy guidance from Department of Information Technology.

(v) To Act as dispute resolution body for inter departmental issues and provde periodic status reports to the Apex Committee"

ಈ ಪ್ರಸ್ತಾವನೆಯನ್ನು ಸರ್ಕಾರ ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 08 ಇಆಇ 2013, ಬೆಂಗಳೂರು, ದಿನಾಂಕ: 07ನೇ ಫೆಬ್ರವರಿ, 2013.**

4. ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ, ಸರ್ಕಾರವು ಈ ಕೆಳಕಂಡ ಸದಸ್ಯರನ್ನೊಳಗೊಂಡ ಇ–ಆಡಳಿತ ಮೂಲಸೌಕರ್ಯ ನಿರ್ವಹಣಾ ಸಮಿತಿ [e-Governance Infrastructure Management Committee (EGIMC)] ಯನ್ನು ಈ ಮೂಲಕ ರಚಿಸಿದೆ :–

4.1 **ಅಧ್ಯಕ್ಷರು**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಆಸುಇ (ಇ–ಆಡಳಿತ)

4.2 **ಸದಸ್ಯರು**

(1) ಆಯುಕ್ತರು, ಭೂ ಮಾಪನ ಮತ್ತು ಭೂ ದಾಖಲೆಗಳು

(2) ಇನ್ಸ್‌ಪೆಕ್ಟರ್ ಜನರಲ್ ಆಫ್ ಸ್ಟಾಂಪ್ಸ್ ಅಂಡ್ ರಿಜಿಸ್ಟ್ರೇಷನ್

(3) ನಿರ್ದೇಶಕರು, ನೆಮ್ಮದಿ ನಿರ್ದೇಶನಾಲಯ

(4) ಆಯುಕ್ತರು, ಸಾರಿಗೆ ಇಲಾಖೆ

(5) ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಇ–ಆಡಳಿತ ಕೇಂದ್ರ

(6) ಅಡಿಷನಲ್ ಡೆಪ್ಯೂಟಿ ಜನರಲ್ ಆಫ್ ಪೊಲೀಸ್, ಪೊಲೀಸ್ ಕಂಪ್ಯೂಟರ್ ವಿಂಗ್

(7) ಸೆಂಟ್ರಲ್ ಪ್ರಾಜೆಕ್ಟ್ ಕೊಆರ್ಡಿನೇಟರ್ (ಕಂಪ್ಯೂಟರ್ಸ್), ಕರ್ನಾಟಕ ಉಚ್ಛ ನ್ಯಾಯಾಲಯ

(8) ನಿರ್ದೇಶಕರು, ಇಡಿಸಿಎಸ್ ನಿರ್ದೇಶನಾಲಯ

(9) ಸರ್ಕಾರದ ಅಪರ ಕಾರ್ಯದರ್ಶಿ, ಸಿಆಸುಇ (ಇ–ಆಡಳಿತ)

(10) ನಿರ್ದೇಶಕರು, ಖಜಾನೆ ನಿರ್ದೇಶನಾಲಯ

(11) ಯೋಜನಾ ನಿರ್ದೇಶಕರು, ಕೆಸ್ವಾನ್, ಇ–ಆಡಳಿತ ಕೇಂದ್ರ.

(12) ಪ್ರೋ. ದೇಬಬ್ರತ ದಾಸ್, ಐಐಐಟಿಬಿ

(13) ಯೋಜನಾ ನಿರ್ದೇಶಕರು, ರಾಜ್ಯ ದತ್ತ ಕೇಂದ್ರ (ಎಸ್‌ಡಿಸಿ), ಇ–ಆಡಳಿತ ಕೇಂದ್ರ.–**ಸದಸ್ಯ ಕಾರ್ಯದರ್ಶಿ**.

5. ಸದರಿ ಸಮಿತಿಯು ಮೇಲಿನ ಕಂಡಿಕೆ –3ರಲ್ಲಿ ಉಲ್ಲೇಖಿಸಿದ ಕಾರ್ಯಗಳನ್ನು ನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ಆರ್. ನಾಗರಾಜ,**
ಪೀಠಾಧಿಕಾರಿ–1 (ಪ್ರಾಭಾರ)
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)

**P.R. 439**

## ಆರ್ಥಿಕ ಸಚಿವಾಲಯ

**ವಿಷಯ :** ಸರಕು ಸಾಮಗ್ರಿ ಖರೀದಿ ಸಂಬಂಧವಾಗಿ ಸಾದಿಲ್ವಾರು ವೆಚ್ಚ ಕೈಪಿಡಿ ನಿಯಮಗಳು ನಿಯಮ–55–49(ಎ) ರಲ್ಲಿನ ಮಿತಿಯನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :** ಜಲಾನಯನ ಅಭಿವೃದ್ಧಿ ಇಲಾಖೆ ಇವರ ಪತ್ರ ಸಂಖ್ಯೆ: ಜಅಇ/ಲೆಕ್ಕ–2/IWMP.AO ವರದಿ/14/2011–12, ದಿನಾಂಕ : 3–9–2011.

**ಪ್ರಸ್ತಾವನೆ:**

ಜಲಾನಯನ ಅಭಿವೃದ್ಧಿ ಇಲಾಖೆ ಆಯುಕ್ತರು ಮೇಲೆ ಓದಲಾದ ಪತ್ರದಲ್ಲಿ ಪ್ರಸ್ತುತ ದಿನಗಳಲ್ಲಿ ಸರಕು ಸಾಮಗ್ರಿ ದರಗಳು ತುಂಬಾ ದುಬಾರಿಯಾಗಿರುವುದರಿಂದ ಹಾಲಿ ಸಾದಿಲ್ವಾರು ವೆಚ್ಚದ ಕೈಪಿಡಿ, 1958ರ ನಿಯಮ 55ರಲ್ಲಿನ 49(ಎ) ರಲ್ಲಿ ಪ್ರತಿ ಬಾರಿ ಸರಕು ಸಾಮಗ್ರಿಗಳನ್ನು ಖರೀದಿಸುವಾಗ ರೂ. 500/– ಗಳ ಮಿತಿಯಿರುವುದರಿಂದ ಅದಕ್ಕೂ ಹೆಚ್ಚಿನ ಸಾಮಗ್ರಿ/ಸೇವೆ ಖರೀದಿಸಬೇಕಾದಲ್ಲಿ ವಿವಿಧ ಸಂಸ್ಥೆಗಳಿಂದ ದರಪಟ್ಟಿ ಕರೆದು ಆ ಮೂಲಕ ಕಡಿಮೆ ದರ ನಮೂದಿಸಿದ ಸಂಸ್ಥೆಯಿಂದ ಖರೀದಿಸಬೇಕಾಗುತ್ತದೆಯೆಂದು ತಿಳಿಸುತ್ತಾ, ಸರಕು ಖರೀದಿ ಸಾಮಗ್ರಿಗಳ ಖರೀದಿಗಾಗಿ ಸಾ.ವೆ.ಕೈ. ನಿಯಮಗಳು ನಿಯಮ 55(49)(ಎ) ರಲ್ಲಿ ನಿಗದಿಗೊಳಿಸಿರುವ ಮಿತಿಯನ್ನು ರೂ. 500/–ಗಳಿಂದ ರೂ. 5000/– ಗಳಿಗೆ ಹೆಚ್ಚಿಸಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

2. ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಗಿನ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 01 ಟಿಸಿಇ 2012, ಬೆಂಗಳೂರು, ದಿನಾಂಕ : 21–6–2012.**

ಸರ್ಕಾರದ ವಿವಿಧ ಇಲಾಖೆಯಲ್ಲಿನ ಕಛೇರಿಗಳಲ್ಲಿ ಅಗತ್ಯವಿರುವ ಸರಕು ಸಾಮಗ್ರಿಗಳನ್ನು ಮುಕ್ತ ಮಾರುಕಟ್ಟೆಯಲ್ಲಿ ಖರೀದಿಸುವ ಸಲುವಾಗಿ ಸಾದಿಲ್ವಾರು ವೆಚ್ಚದ ಕೈಪಿಡಿ 1958 ನಿಯಮಗಳ ನಿಯಮ 55 (49)(ಎ) ರಲ್ಲಿನ ರೂ. 500/–ಗಳ ಮಿತಿಯನ್ನು ರೂ. 5000/– ಗಳಿಗೆ ಹೆಚ್ಚಿಸಿ ಆದೇಶಿಸಲಾಗಿದೆ. ರೂ. 5000/– ಮೀರಿದ ರೂ. 1.00 ಲಕ್ಷಗಳವರೆಗಿನ ಖರೀದಿಗಳನ್ನು ಸ್ಪರ್ಧಾತ್ಮಕ ಕೋಟೇಶನ್ (ದರಪಟ್ಟಿ) ಕರೆಯುವುದರ ಮೂಲಕ

ಖರೀದಿಸತಕ್ಕದ್ದು. ರೂ. 1.00 ಲಕ್ಷ ಮೀರಿದ ಖರೀದಿಗೆ ಕೆ.ಟಿ.ಪಿ.ಪಿ ನಿಯಮ ಅನ್ವಯವಾಗುವುದು. ಸದರಿ ಆದೇಶವು ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.

ಇದನ್ನು ಹೊರತುಪಡಿಸಿ ಸರಕು ಖರೀದಿಗಾಗಿ ನಿಯಮಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ. ಈ ಬಗ್ಗೆ ಸಾದಿಲ್ವಾರು ವೆಚ್ಚದ ಕೈಪಿಡಿ 1958 ನಿಯಮಗಳು ನಿಯಮ 55(49)(ಎ) ಗೆ ತಿದ್ದುಪಡಿ ತರಲು ಪ್ರತ್ಯೇಕವಾಗಿ ಕ್ರಮ ತೆಗೆದುಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ. ಶಾಮರಾವ್**

ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆರ್ಥಿಕ ನಿಯಮಗಳು,

ಆಯವ್ಯಯ ಸಂಕಲನ ಮತ್ತು ಸಮಿತಿ ಶಾಖೆ).

P.R. 442

## ಆರ್ಥಿಕ ಸಚಿವಾಲಯ

**ವಿಷಯ :** ಅಧಿಕೃತ ಸಭೆಗಳಲ್ಲಿ ನೀಡುವ ಟೀ/ಕಾಫೀ/ಅಲ್ಪೋಪಹಾರದ ಸಲುವಾಗಿ ಮಾಡುವ ವೆಚ್ಚದ ಮಿತಿಯನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 01 (ಭಾ) ಟಿಸಿಇ 2009, ದಿನಾಂಕ: 2–7–2009

2. ತಿದ್ದುಪಡಿ ಆದೇಶ ಸಂಖ್ಯೆ ಆಇ 01 (ಭಾ) ಟಿಸಿಇ 2009, ದಿನಾಂಕ: 22–6–2012

**ಪ್ರಸ್ತಾವನೆ:**

ಸಾದಿಲ್ವಾರು ವೆಚ್ಚ ಕೈಪಿಡಿ 1958ರ ನಿಯಮ 55 (51)ರ ಪ್ರಕಾರ ಮುಖ್ಯ ಕಾರ್ಯದರ್ಶಿಗಳು, ಅಪರ ಮುಖ್ಯ ಕಾರ್ಯದರ್ಶಿಗಳು, ಪ್ರಧಾನ ಕಾರ್ಯದರ್ಶಿಗಳು, ಕಾರ್ಯದರ್ಶಿಗಳು, ಅಪರ ಕಾರ್ಯದರ್ಶಿಗಳು, ಜಂಟಿ ಕಾರ್ಯದರ್ಶಿಗಳು, ಇಲಾಖಾ ಮುಖ್ಯಸ್ಥರು, ಜಿಲ್ಲಾಧಿಕಾರಿಗಳು ಮತ್ತು ಇತರೆ ಅಧಿಕಾರಿಗಳು ಹಾಗೂ ರಾಜ್ಯ ಮಟ್ಟದ ಮತ್ತು ಜಿಲ್ಲಾ ಮಟ್ಟದ ಸಮಿತಿಗಳು ಅಧಿಕೃತ ಸಭೆಗಳಲ್ಲಿ ನೀಡುವ ಟೀ/ಕಾಫೀ/ಅಲ್ಪೋಪಹಾರದ ಸಲುವಾಗಿ ಮಾಡುವ ವೆಚ್ಚದ ಆರ್ಥಿಕ ಮಿತಿಯನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ : 2–7–2009ರ ಆದೇಶದಲ್ಲಿ ಪರಿಷ್ಕರಿಸಿ ನಿಗದಿಗೊಳಿಸಲಾಗಿತ್ತು. ದಿನೇ ದಿನೇ ಹೆಚ್ಚುತ್ತಿರುವ ಬೆಲೆ ಏರಿಕೆಯ ಕಾರಣದಿಂದ ಹಾಗೂ ಹೆಚ್ಚು ಹೆಚ್ಚು ಸಭೆಗಳನ್ನು ನಡೆಸಬೇಕಾಗಿರುವುದರಿಂದ ವೆಚ್ಚದ ಮಿತಿಯನ್ನು ಹೆಚ್ಚಿಸುವ ವಿಷಯವನ್ನು ಸರ್ಕಾರವು ಪರಿಶೀಲಿಸಿ ಪರಿಷ್ಕರಿಸಲು ತೀರ್ಮಾನಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 2 ಟಿಸಿಇ 2012, ಬೆಂಗಳೂರು, ದಿನಾಂಕ : 15–12–2012.**

ಅಧಿಕೃತ ಸಭೆಗಳಲ್ಲಿ ನೀಡುವ ಟೀ/ಕಾಫೀ/ಅಲ್ಪೋಪರಾಹದ ಸಲುವಾಗಿ ಮುಖ್ಯ ಕಾರ್ಯದರ್ಶಿಗಳು, ಅಪರ ಮುಖ್ಯ ಕಾರ್ಯದರ್ಶಿಗಳು, ಪ್ರಧಾನ ಕಾರ್ಯದರ್ಶಿಗಳು, ಕಾರ್ಯದರ್ಶಿಗಳು, ಅಪರ ಕಾರ್ಯದರ್ಶಿಗಳು, ಜಂಟಿ ಕಾರ್ಯದರ್ಶಿಗಳು, ಇಲಾಖಾ ಮುಖ್ಯಸ್ಥರು, ಜಿಲ್ಲಾಧಿಕಾರಿಗಳು ಮತ್ತು ಇತರೆ ಅಧಿಕಾರಿಗಳು ಹಾಗೂ ರಾಜ್ಯ ಮಟ್ಟದ ಮತ್ತು ಜಿಲ್ಲಾ ಮಟ್ಟದ ಸಮಿತಿಗಳು ಮಾಡಬಹುದಾದ ವೆಚ್ಚದ ಮಿತಿಯನ್ನು ಪರಿಷ್ಕರಿಸಿ ಈ ಕೆಳಗಿನಂತೆ ನಿಗದಿಪಡಿಸಲಾಗಿದೆ.

| ಕ್ರ. ಸಂ. | ಅಧಿಕಾರಿಗಳು | ಅವಧಿ | ಆರ್ಥಿಕ ಮಿತಿ |
|---|---|---|---|
| 1. | ಮುಖ್ಯ ಕಾರ್ಯದರ್ಶಿಗಳು, ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಸಮಾನಾಂತರ ಅಧಿಕಾರಿಗಳು, ಮಹಾ ನಿರ್ದೇಶಕರು ಹಾಗೂ ಆರಕ್ಷಕ ಮಹಾ ನಿರೀಕ್ಷಕರು | ಪ್ರತಿಯೊಬ್ಬರಿಗೆ ಒಂದು ವರ್ಷಕ್ಕೆ | ರೂ. 30,000 |
| 2. | ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು ವಿಶೇಷ ಕಾರ್ಯದರ್ಶಿ, ಪ್ರಾದೇಶಿಕ ಆಯುಕ್ತರು, ವಾಣಿಜ್ಯ ತೆರಿಗೆ ಆಯುಕ್ತರು, ಅಬಕಾರಿ ಆಯುಕ್ತರು, ಕೈಗಾರಿಕಾ ಅಭಿವೃದ್ಧಿ ಆಯುಕ್ತರು ಹಾಗೂ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ನಿರ್ದೇಶಕರು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಮತ್ತು ರೇಷ್ಮೆ ಇಲಾಖೆಯ ನಿರ್ದೇಶಕರು, ಅಪರ ಆರಕ್ಷಕ ಮಹಾ ನಿರ್ದೇಶಕರು (ADGP) ಆರಕ್ಷಕ ಆಯುಕ್ತರು Commissioner of Police) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (PCCF), ಮುಖ್ಯ ಮಂತ್ರಿಯವರ ಆರ್ಥಿಕ ಸಲಹೆಗಾರರು | ಪ್ರತಿಯೊಬ್ಬರಿಗೆ ಒಂದು ವರ್ಷಕ್ಕೆ | ರೂ. 20,000 |
| 3. | ಅಪರ ಕಾರ್ಯದರ್ಶಿ, ಜಂಟಿ ಕಾರ್ಯದರ್ಶಿಗಳು, ಮುಖ್ಯ ಮಂತ್ರಿಯವರ ಪತ್ರಿಕಾ ಕಾರ್ಯದರ್ಶಿ, ಇಲಾಖಾ ಮುಖ್ಯಸ್ಥರು (ಮೇಲೆ (2) ರಲ್ಲಿ ತಿಳಿಸಿರುವವರನ್ನು ಹೊರತುಪಡಿಸಿ) | ಪ್ರತಿಯೊಬ್ಬರಿಗೆ ಒಂದು ವರ್ಷಕ್ಕೆ | ರೂ. 12,500 |
| 4. | ಜಿಲ್ಲಾಧಿಕಾರಿಗಳು | ಪ್ರತಿಯೊಬ್ಬರಿಗೆ ಒಂದು ವರ್ಷಕ್ಕೆ | ರೂ. 20,000 |
| 5. | ರಾಜ್ಯ ಮಟ್ಟದ ಮತ್ತು ಜಿಲ್ಲಾ ಮಟ್ಟದ ಸಮಿತಿಗಳು | ಪ್ರತಿಯೊಂದಕ್ಕೆ ಒಂದು ವರ್ಷಕ್ಕೆ | ರೂ. 6,000 |

ನಿಗದಿ ಪಡಿಸಿರುವ ಪರಿಷ್ಕೃತ ದರಗಳು ಕೂಡಲೇ ಜಾರಿಗೆ ಬರುತ್ತದೆ. ಈ ಬಗ್ಗೆ ಸಾದಿಲ್ವಾರು ವೆಚ್ಚ ಕೈಪಿಡಿ ನಿಯಮಗಳಿಗೆ ಸೂಕ್ತ ತಿದ್ದುಪಡಿ ಮಾಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ. ಶಾಮರಾವ್**
ಸರ್ಕಾರದ ಉಪ ಕಾರ್ಯದರ್ಶಿ,
(ಆರ್ಥಿಕ ನಿಯಮಗಳು, ಆಯವ್ಯಯ ಸಂಕಲನ ಮತ್ತು ಸಮಿತಿ ಶಾಖೆ)
ಆರ್ಥಿಕ ಇಲಾಖೆ.

P.R. 443

## ಆರ್ಥಿಕ ಸಚಿವಾಲಯ

**ವಿಷಯ** : ಸರ್ಕಾರದ ಪರವಾಗಿ ಹಾಜರಾಗುವ ಖಾಸಗಿ ವಕೀಲರಿಗೆ ಸಂಭಾವನೆಯನ್ನು ನೀಡುವ ಬಗ್ಗೆ ಆರ್ಥಿಕ ಅಧಿಕಾರಗಳ ಪ್ರತ್ಯಾಯೋಜನೆ–ತತ್ಸಂಬಂಧ ಸರ್ಕಾರದ ಆದೇಶ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ : ಆಇ 1 ಟಿಎಫ್‌ಪಿ 96, ದಿನಾಂಕ : 10–7–1996.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಆರ್ಥಿಕ ಇಲಾಖೆಯು ಕರ್ನಾಟಕ ಸರ್ಕಾರಿ (ವ್ಯವಹಾರ ನಿರ್ವಹಣೆ) ನಿಯಮಗಳು, 1977ರ ನಿಯಮ 45ರಲ್ಲಿ ಉದ್ದೇಶಿಸಿದಂತೆ ತನ್ನ ಅನುಮತಿಯನ್ನು ನೀಡಲಾಗಿದೆ ಎಂದು ಭಾವಿಸಬಹುದಾದ ಪ್ರಕರಣಗಳನ್ನು ಗೊತ್ತುಪಡಿಸಿದೆ. ಈ ಆದೇಶದಂತೆ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರಗಳನ್ನು ಇಲಾಖಾ ಕಾರ್ಯದರ್ಶಿಗಳು ಚಲಾಯಿಸಬಹುದಾಗಿದೆ.

ವಿಚಾರಣಾ ಆಯೋಗಗಳು, ನ್ಯಾಯ ಮಂಡಳಿಗಳು ಮತ್ತು ನ್ಯಾಯಾಲಯಗಳ ಮುಂದೆ ಸರ್ಕಾರ/ಇಲಾಖಾ ಮುಖ್ಯಸ್ಥರ ಪರವಾಗಿ ವಾದ ಮಂಡಿಸಲು ಬಳಸಿಕೊಂಡ ಖಾಸಗಿ ವಕೀಲರುಗಳಿಗೆ ಸಂಭಾವನೆ ನೀಡುವ ಬಗ್ಗೆ ಮಂಜೂರಾತಿ ಕೋರಿ ಪ್ರಸ್ತಾವನೆಗಳು ಆರ್ಥಿಕ ಇಲಾಖೆಗೆ ಹೆಚ್ಚಾಗಿ ಬರುತ್ತಿರುವುದರಿಂದ ಹಾಗೂ ವಕೀಲರುಗಳಿಗೆ ಸಂಭಾವನೆ ನೀಡುವಲ್ಲಿ ವಿಳಂಬವಾಗುತ್ತಿರುವುದನ್ನು ಸಹ ಪರಿಗಣಿಸಿ ಇಂತಹ ಪ್ರಕರಣಗಳಿಗೆ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಅಧಿಕಾರ ಪ್ರತ್ಯಾಯೋಜಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 3 ಟಿಎಫ್‌ಪಿ 2011, ಬೆಂಗಳೂರು, ದಿನಾಂಕ : 27–1–2012.**

ಎಲ್ಲಾ ತರಹದ ವಿಚಾರಣಾ ಆಯೋಗಗಳು, ನ್ಯಾಯ ಮಂಡಳಿಗಳು ಮತ್ತು ನ್ಯಾಯಾಲಯಗಳ ಮುಂದೆ ಸರ್ಕಾರ/ಇಲಾಖಾ ಮುಖ್ಯಸ್ಥರ ಪರವಾಗಿ ವಾದ ಮಂಡಿಸಲು ಖಾಸಗಿ ವಕೀಲರ ಸೇವೆಯನ್ನು ಬಳಸಿಕೊಂಡಲ್ಲಿ ಅಂತಹ ಪ್ರಕರಣಗಳಲ್ಲಿ ಕಾನೂನು ಇಲಾಖೆಯ ಪೂರ್ವಾನುಮತಿಯನ್ನು ಪಡೆಯುವ ಷರತ್ತಿಗೆ ಒಳಪಟ್ಟು ಸಂಭಾವನೆಯನ್ನು ಮಂಜೂರು ಮಾಡುವ ಅಧಿಕಾರವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾಗಿದೆ. ಆದರೆ ಕ್ಲೇಮುಗಳನ್ನು ನಿಗದಿ ಮಾಡುವಾಗ ಸರ್ಕಾರಿ ವಕೀಲರಿಗೆ ಅನ್ವಯವಾಗುವ ಶುಲ್ಕವನ್ನು ಉಲ್ಲೇಖವಾಗಿ ತೆಗೆದುಕೊಳ್ಳಬೇಕು. ಹಾಗೆಯೇ ಕ್ಲೇಮುಗಳ ಮೊತ್ತವು ಹೆಚ್ಚೆಂದು ಕಂಡುಬರುವ ಪ್ರಕರಣಗಳಲ್ಲಿ ಸಂಬಂಧಿಸಿದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗೆ ಅಂತಹ ಹೆಚ್ಚುವರಿ ಮೊತ್ತದ ಕ್ಲೇಮುಗಳ ಸೂಕ್ತತೆಯ ಬಗ್ಗೆ ತೃಪ್ತಿಕರವಾಗಿದೆಯೆಂದು ಮನವರಿಕೆಯಾಗಿರಬೇಕು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ. ಶಾಮರಾವ್**
ಸರ್ಕಾರದ ಉಪ ಕಾರ್ಯದರ್ಶಿ,
(ಆರ್ಥಿಕ ನಿಯಮಗಳು, ಆಯವ್ಯಯ ಸಂಕಲನ ಮತ್ತು ಸಮಿತಿ ಶಾಖೆ)
ಆರ್ಥಿಕ ಇಲಾಖೆ.

P.R. 444

## ತೋಟಗಾರಿಕಾ ಸಚಿವಾಲಯ

**ವಿಷಯ :** ಶ್ರೀ ನಟರಾಜ ಪರಸಣ್ಣನವರ್ ಸತೋಅ. ತೋಟಗಾರಿಕೆ ಇಲಾಖೆ ಇವರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ.

**ಓದಲಾಗಿದೆ:**
1. ತೋಟಗಾರಿಕೆ ನಿರ್ದೇಶಕರ ಆದೇಶ ಸಂಖ್ಯೆ : ತೋಇ/ಆ/ಸಿ/10–1/50/2005–06, ದಿನಾಂಕ: 18–1–2006
2. ಸರ್ಕಾರದ ಆದೇಶ ಸಂಖ್ಯೆ : ಕೃತೋಇ 157 ತೋಸೇಪ 2006, ದಿನಾಂಕ : 9–10–2006
3. ಲೋಕಾಯುಕ್ತರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಸಿಟಿಎಲ್–1/ಸಿಆರ್–1/2006, ಚಿತ್ರದುರ್ಗ ದಿನಾಂಕ: 2–6–2011.
4. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗರವರ ಪತ್ರ ದಿನಾಂಕ : 11–7–2012.

**ಪ್ರಸ್ತಾವನೆ :**

ಶ್ರೀ ನಟರಾಜ ಪರಸಣ್ಣನವರ್, ಸಹಾಯಕ ತೋಟಗಾರಿಕೆ ಅಧಿಕಾರಿ ಹಾಗೂ ಪ್ರಭಾರೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರಾಗಿ ಚಳ್ಳಕೆರೆ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಶ್ರೀ ಎನ್. ಸೋಮಶೇಖರಪ್ಪ ಬಿನ್ ಗಿರಿಯಪ್ಪ, ಭರಮಸಾಗರ ಹಳ್ಳಿ, ಚಳ್ಳಕೆರೆ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರ ಜಮೀನಿಗೆ ನೆಲ್ಲಿಗಿಡಗಳನ್ನು ಒದಗಿಸುವ ಸಂಬಂಧ ಲಂಚಕ್ಕೆ ಒತ್ತಾಯಿಸುತ್ತಿರುತ್ತಾರೆಂದು ಲಿಖಿತ ದೂರಿನ ಆಧಾರದ ಮೇಲೆ ದಿನಾಂಕ: 5–1–2006 ರಂದು ಲೋಕಾಯುಕ್ತ ಪೊಲೀಸರು ದಾಳಿ ನಡೆಸಿದಾಗ ಶ್ರೀ ನಟರಾಜ ಪರಸಣ್ಣನವರ್ ಇವರು ರೂ. 1,000/–ಗಳ ಲಂಚ ಸ್ವೀಕರಿಸುವಾಗ ಲೋಕಾಯುಕ್ತ ಬಲೆಗೆ ಸಿಕ್ಕಿಬಿದ್ದ ಕಾರಣ ಈ ಆರೋಪಕ್ಕಾಗಿ ಅಧಿಕಾರಿಯನ್ನು ಮೇಲೆ ಕ್ರ. ಸಂಖ್ಯೆ : 1 ರಲ್ಲಿ ಓದಲಾದ ಆದೇಶದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಿದ್ದು, ನಂತರ ಅಧಿಕಾರಿಯ ಅಮಾನತ್ತು ರದ್ದುಗೊಳಿಸಿ ದಿನಾಂಕ : 27–9–2006 ರಂದು ಸೇವೆಗೆ ಪುನರ್ ಸ್ಥಾಪಿಸಲಾಗಿದೆ.

ಅಧಿಕಾರಿಯ ವಿರುದ್ಧದ ಟ್ರ್ಯಾಪ್ ಪ್ರಕರಣವು ಮೇಲ್ನೋಟಕ್ಕೆ ಸಾಬೀತಾದ ಹಿನ್ನೆಲೆಯಲ್ಲಿ ಶ್ರೀ ನಟರಾಜ ಪರಸಣ್ಣನವರ್, ಸಹಾಯಕ ತೋಟಗಾರಿಕೆ ಅಧಿಕಾರಿಯವರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೊಳಪಡಿಸಲು ಭ್ರಷ್ಟಾಚಾರ ನಿರ್ಮೂಲನ ಕಾಯಿದೆ 1988ರ ಕಲಂ 19(1) ರನ್ವಯ ಮಂಜೂರಾತಿ ನೀಡುವಂತೆ ಲೋಕಾಯುಕ್ತ ಪೊಲೀಸರು ಕೋರಿದ್ದು, ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ : 2ರ ಆದೇಶದಲ್ಲಿ ಅಧಿಕಾರಿಯನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಮಂಜೂರಾತಿಯನ್ನು ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ : 3ರಲ್ಲಿ ಓದಲಾದ ಕರ್ನಾಟಕ ಲೋಕಾಯುಕ್ತ ಕಛೇರಿಯ ಪತ್ರದಲ್ಲಿ ಶ್ರೀ ನಟರಾಜ ಪರಸಣ್ಣನವರ್, ಸಹಾಯಕ ತೋಟಗಾರಿಕೆ ಅಧಿಕಾರಿ, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ ಇವರ ವಿರುದ್ಧ ದಾಖಲಾಗಿರುವ ಪ್ರಕರಣದಲ್ಲಿ ಲಂಚ ನಿರೋಧ ಕಾಯ್ದೆಯ ಕಲಂ 7 ರಡಿಯಲ್ಲಿ ತಪ್ಪಿತಸ್ಥರೆಂದು ನಿರ್ಧರಿಸಿ 1 ವರ್ಷದ ಸಾದಾ ಸಜೆ ಮತ್ತು ರೂ. 3,000/– ದಂಡ ಕಟ್ಟಲು, ತಪ್ಪಿದಲ್ಲಿ 5 ತಿಂಗಳ ಹೆಚ್ಚುವರಿ ಸಾಧಾರಣ ಕಾರಾವಾಸದ ದಂಡನೆಯನ್ನು ವಿಧಿಸಿರುತ್ತದೆ. ಹಾಗೂ ಕಲಂ 13 (1) ರ ಅಡಿಯಲ್ಲಿ ಸಹ ತಪ್ಪಿತಸ್ಥರೆಂದು ನ್ಯಾಯಾಲಯವು ನಿರ್ಧರಿಸಿ 2 ವರ್ಷಗಳ ಸಾಧಾರಣ ಸೆರೆವಾಸ ಹಾಗೂ ರೂ. 5,000/–ಗಳ ದಂಡ, ತಪ್ಪಿದಲ್ಲಿ 5 ತಿಂಗಳ ಹೆಚ್ಚುವರಿ ಕಾರಾವಾಸದ ದಂಡನೆ ದಿನಾಂಕ : 30–3–2011ರ ತೀರ್ಪಿನಲ್ಲಿ ಆದೇಶಿಸಿರುತ್ತದೆ. ಈ ತೀರ್ಪಿನ ಹಿನ್ನೆಲೆಯಲ್ಲಿ ಭಾರತೀಯ ಸಂವಿಧಾನದ ಅನುಚ್ಛೇದ 311 (2) ಪ್ರವರ್ಗ, ಕ.ನಾಸೇ. (ಸಿಸಿಎ) ನಿಯಮಾವಳಿಗಳು 1957ರ ನಿಯಮ 14 ಹಾಗೂ 10(2) ಮತ್ತು ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ 9 ಸೇಇವಿ 95, ದಿನಾಂಕ : 26–6–1996, ಸರ್ವೋಚ್ಚ ನ್ಯಾಯಾಲಯದ ಕ್ರಿಮಿನಲ್ ಮೇಲ್ಮನವಿ ಸಂಖ್ಯೆ : 770/2011ರ ತೀರ್ಪಿನನ್ವಯ ಸೆಳೆಯುತ್ತ ಶ್ರೀ ನಟರಾಜ್ ಪರಸಣ್ಣನವರ್, ಸಹಾಯಕ ತೋಟಗಾರಿಕೆ ಅಧಿಕಾರಿ, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ ಇವರನ್ನು ಕೂಡಲೇ ಸೇವೆಯಿಂದ ವಜಾಗೊಳಿಸಲು ಕ್ರಮ ಕೈಗೊಳ್ಳುವಂತೆ ಕೋರಲಾಗಿದೆ.

ಮೇಲೆ ಕ್ರ.ಸಂ. 4 ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಶ್ರೀ ನಟರಾಜ್ ಪರಸಣ್ಣನವರ್, ಸಹಾಯಕ ತೋಟಗಾರಿಕೆ ಅಧಿಕಾರಿ, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ ಇವರನ್ನು ಸೇವೆಯಿಂದ ವಜಾಗೊಳಿಸುವ ಪ್ರಸ್ತಾವನೆಗೆ ಸಹಮತಿ ನೀಡಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ತೋಇ 149 ತೋಸೇಪ 2011, ಬೆಂಗಳೂರು, ದಿನಾಂಕ : 12–10–2012.**

ಶ್ರೀ ನಟರಾಜ ಪರಸಣ್ಣನವರ್, ಸಹಾಯಕ ತೋಟಗಾರಿಕೆ ಅಧಿಕಾರಿ, ತೋಟಗಾರಿಕೆ ಇಲಾಖೆ ಇವರ ವಿರುದ್ಧದ ಲಂಚ ನಿರೋಧ ಕಾಯ್ದೆಯಡಿ ಜಿಲ್ಲಾ ಹಾಗೂ ಸೆಷನ್ಸ್ ನ್ಯಾಯಾಲಯ, ಚಿತ್ರದುರ್ಗ ಇಲ್ಲಿ ದಾಖಲಾಗಿದ್ದ ವಿಶೇಷ ಪ್ರಕರಣ ಸಂಖ್ಯೆ : 8/2006ರಲ್ಲಿ ದಿನಾಂಕ : 30–3–2011 ರ ಆದೇಶದಲ್ಲಿ ನ್ಯಾಯಾಲಯವು ಆಪಾದಿತ ಅಧಿಕಾರಿಯ ವಿರುದ್ಧದ ಆರೋಪವು ಸಾಬೀತಾಗಿರುವುದರಿಂದ ಸಾಬೀತಾದ ಆರೋಪಗಳಿಗೆ ಸಾದಾ ಸಜೆ ಮತ್ತು ದಂಡ ವಿಧಿಸಿರುವುದರಿಂದ, ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮ 8 (viii) ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿಯವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಸಿ. ಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ.

**P.R. 447**

**SC - 10**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಸುತ್ತೋಲೆ

**ವಿಷಯ :** ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹುದ್ದೆಗಳು ರಜೆ ಅಥವಾ ವರ್ಗಾವಣೆಯಿಂದ ತೆರವಾದ ಸಂದರ್ಭಗಳಲ್ಲಿ ಜಿಲ್ಲಾಧಿಕಾರಿಗಳನ್ನು ಹೆಚ್ಚಿನ ಪ್ರಭಾರದಲ್ಲಿಡುವ ಬಗ್ಗೆ ಸೂಚನೆಗಳು.

ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹುದ್ದೆಗಳು ಜಿಲ್ಲಾ ಮಟ್ಟದಲ್ಲಿ ಪ್ರಮುಖ ಹುದ್ದೆಯಾಗಿದ್ದು, ಸದರಿ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳು ರಜೆಯ ಮೇಲೆ ತೆರಳಿದಾಗ ಅಥವಾ ವರ್ಗಾವಣೆಯಿಂದ ಹುದ್ದೆ ಖಾಲಿ ಆದ ಸಂದರ್ಭಗಳಲ್ಲಿ ಜಿಲ್ಲಾ ಪಂಚಾಯತಿಯ ಉಪ ಕಾರ್ಯದರ್ಶಿಗಳನ್ನು ಹೆಚ್ಚುವರಿ ಪ್ರಭಾರದಲ್ಲಿಡುವ ವ್ಯವಸ್ಥೆ ಚಾಲ್ತಿಯಲ್ಲಿದೆ. ಈ ಪದ್ಧತಿಯಿಂದ ಜಿಲ್ಲಾ ಪಂಚಾಯತಿಯ ಒಟ್ಟಾರೆ ಆಡಳಿತ ನಿರ್ವಹಣೆ ಹಾಗೂ ಜಿಲ್ಲಾಡಳಿತದೊಂದಿಗೆ ಸಮನ್ವಯತೆಗೆ ಉಂಟಾಗುವ ಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು ಅದನ್ನು ಸರಿಪಡಿಸುವ ದೃಷ್ಟಿಯಿಂದ ಈ ಹಿಂದೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಅಂತಹ ಸಂದರ್ಭಗಳಲ್ಲಿ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹುದ್ದೆಗಳಿಗೆ ಜಿಲ್ಲಾಧಿಕಾರಿಗಳನ್ನು ಹೆಚ್ಚುವರಿ ಪ್ರಭಾರದಲ್ಲಿಡಲು ಪ್ರಸ್ತಾಪಿಸಿತ್ತು. ಈ ಪ್ರಸ್ತಾವನೆಯನ್ನು ಒಪ್ಪಿಕೊಂಡು ಅದನ್ನು ಅನುಷ್ಠಾನಗೊಳಿಸಲಾಗುತ್ತಿದ್ದು, ಬಹುತೇಕ ಸಂದರ್ಭಗಳಲ್ಲಿ ಜಿಲ್ಲಾಧಿಕಾರಿಗಳನ್ನು ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹುದ್ದೆಗಳ ಹೆಚ್ಚುವರಿ ಪ್ರಭಾರದಲ್ಲಿರಿಸಲಾಗುತ್ತಿದೆ.

ಆದರೆ ಈ ವ್ಯವಸ್ಥೆಯು ಸಮರ್ಪಕವಾಗಿ ಅನುಷ್ಠಾನಗೊಳ್ಳುತ್ತಿಲ್ಲವಾದ್ದರಿಂದ ಹಾಗೂ ಬೇರೆ ಅಧಿಕಾರಿಗಳನ್ನು ಹೆಚ್ಚುವರಿ ಪ್ರಭಾರದಲ್ಲಿ ಇಡುವುದರಿಂದ ಉಂಟಾಗಬಹುದಾದ ಆಡಳಿತದಲ್ಲಿನ ನ್ಯೂನತೆಗಳನ್ನು ಗಮನದಲ್ಲಿಟ್ಟುಕೊಂಡು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು ರಜೆಯಲ್ಲಿ ತೆರಳಿದ ಸಂದರ್ಭಗಳಲ್ಲಿ (ಸಾಂದರ್ಭಿಕ ರಜೆ ಹೊರತುಪಡಿಸಿ) ಅಥವಾ ವರ್ಗಾವಣೆಯಿಂದ ಹುದ್ದೆ ಖಾಲಿ ಆದಲ್ಲಿ ಸದರಿ ಹುದ್ದೆಗಳಿಗೆ ಕಡ್ಡಾಯವಾಗಿ ಜಿಲ್ಲಾಧಿಕಾರಿಗಳನ್ನೇ ಹೆಚ್ಚುವರಿ ಪ್ರಭಾರದಲ್ಲಿ ನೇಮಿಸುವ ಬಗ್ಗೆ ಸೂಕ್ತ ಕಾರ್ಯನೀತಿಯನ್ನು ಅಳವಡಿಸಿ ಅನುಷ್ಠಾನಗೊಳಿಸುವ ಬಗ್ಗೆ ಕಂದಾಯ ಇಲಾಖೆಯ ಸಹಮತಿಯೊಂದಿಗೆ ಪ್ರಸ್ತಾವನೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಸಲ್ಲಿಸಿದೆ.

ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹುದ್ದೆಗಳು ಜಿಲ್ಲಾ ಮಟ್ಟದಲ್ಲಿ ಪ್ರಮುಖ ಹುದ್ದೆಗಳಾಗಿದ್ದು, ಜಿಲ್ಲಾ ಪಂಚಾಯತಿಯ ಸುಗಮ ಆಡಳಿತ ನಿರ್ವಹಣೆ ದೃಷ್ಟಿಯಿಂದ ಹಾಗೂ ಜಿಲ್ಲಾಡಳಿತದೊಂದಿಗೆ ಸೂಕ್ತ ಸಮನ್ವಯ ಏರ್ಪಡಿಸುವ ದೃಷ್ಟಿಯಿಂದ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳು ರಜೆಯಲ್ಲಿ ತೆರಳಿದ ಅಥವಾ ವರ್ಗಾವಣೆಯಿಂದ ತೆರವಾದ ಸಂದರ್ಭಗಳಲ್ಲಿ ಸದರಿ ಹುದ್ದೆ ಖಾಯಂ ಆಗಿ ಭರ್ತಿ

ಆಗುವವರೆಗೆ ಜಿಲ್ಲಾಧಿಕಾರಿಯನ್ನು ಸದರಿ ಹುದ್ದೆಯ ಹೆಚ್ಚುವರಿ ಪ್ರಭಾರದಲ್ಲಿರಿಸುವ ಕಾರ್ಯನೀತಿಯನ್ನು ಅನುಷ್ಠಾನಗೊಳಿಸುವುದು ಸೂಕ್ತವೆಂದು ನಿರ್ಣಯಿಸಲಾಗಿದೆ.

ಮೇಲ್ಕಂಡ ಹಿನ್ನೆಲೆಯಲ್ಲಿ ಭವಿಷ್ಯದಲ್ಲಿ ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹುದ್ದೆಗಳು ಅಧಿಕಾರಿ ರಜೆ ಮೇಲೆ ತೆರಳುವುದರಿಂದ ಅಥವಾ ವರ್ಗಾವಣೆಯಿಂದ ಖಾಲಿ ಆದಲ್ಲಿ ಸದರಿ ಹುದ್ದೆಯು ಖಾಯಂ ಆಗಿ ಭರ್ತಿ ಆಗುವವರೆಗೆ ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಯವರನ್ನು ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ ಹುದ್ದೆಯಲ್ಲಿ ಕಡ್ಡಾಯವಾಗಿ ಹೆಚ್ಚುವರಿ ಪ್ರಭಾರದಲ್ಲಿರಿಸಬೇಕೆಂದು ಈ ಮೂಲಕ ಸೂಚಿಸಲಾಗಿದೆ.

ಈ ಸೂಚನೆಗಳನ್ನು ಸಂಬಂಧಪಟ್ಟವರು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

**ಎಸ್.ವಿ. ರಂಗನಾಥ್**
ಸರ್ಕಾರದ ಮುಖ್ಯ ಕಾರ್ಯದರ್ಶಿ,

**P.R. 450**

## PERSONNEL AND ADMINISTRATIVE REFORMS SECRETARIAT

**SUB :** Revocation of suspension of Dr. Shamla Iqbal, IAS (KN 2002)

**READ :** Government Order No. DPAR 233 SAS 2012, dated : 20-4-2012

### GOVERNMENT ORDER NO. DPAR 233 SAS 2012, BANGALORE, DATED : 21st February, 2013.

Whereas, based on the preliminary investigation report submitted by the Additional Director General of Police, Karnataka Lokayukta regarding irregularities into the Government of India sponsored Integrated Child Development Scheme in Women and Child Development Department while working as Director of the said department and also regarding possession of assetss disproportionate to known sources of income and based on the recommendation made in the said report, Dr. Shamla Iqbal, IAS (KN 2002), the then Director, Women and Child Development Department, was placed under suspension in Government Order dated 20-4-2012.

Whereas, Dr. Shamla Iqbal, IAS, has requested to revoke suspension and reinstate her into service as she has already spent more than six months under suspension.

Whereas the State Government has examined the request in consultation with Karnataka Lokayukta in terms of instructions contained in circular No. DPAR 42 SeEiVi 2011 dated 28-9-2011 and the Additional Director General of Police, Karnataka Lokayukta has given consent for revocation of suspension.

Whereas, the State Government has examined the proposal in the light of the opinion given by the ADGP, Karnataka Lokayukta and has decided to revoke suspension and reinstate Dr. Shamla Iqbal, IAS into service.

Now, therefore, in exercise of the powers conferred by rule 3(7)(c) of the AIS(D&A) Rules, 1969, State Government hereby revokes suspension and reinstate Dr. Shamla Iqbal, IAS (KN 2002), into service with immediate effect.

By Order and in the name of the Governor of Karnataka,
**U.H. NARAYANASWAMY**
Under Secretary to Government,
DP & AR (Services-V).

**P.R. 452**

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಎಲ್.ಸಿ. ಪಾಂಡುರಂಗಪ್ಪ, ದ್ವಿತೀಯ ದರ್ಜೆ ಸಹಾಯಕ ಉಪ ಖಜಾನೆ, ಕಡೂರು ಇವರ ಮೇಲಿನ ಟ್ರ್ಯಾಪ್ ಪ್ರಕರಣದ ವಿಚಾರಣೆಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ :** ಉಪ ನಿಬಂಧಕರು, ವಿಚಾರಣೆಗಳು–I ಮತ್ತು ಮಾನ್ಯ ಕರ್ನಾಟಕ ಉಪ ಲೋಕಾಯುಕ್ತರು– II ಬೆಂಗಳೂರು ಇವರ ವರದಿ ಪತ್ರ ಸಂ. Compt/uplok/MYS/504/2011/DRE-1, dt. 26-2-2013 ಮತ್ತು 21–2–2013

**ಪ್ರಸ್ತಾವನೆ:**

ಉಪ ನಿಬಂಧಕರು, ವಿಚಾರಣೆಗಳು– I, ಕರ್ನಾಟಕ ಲೋಕಾಯುಕ್ತ ಇವರು ಮೇಲೆ ಓದಲಾದ ದಿನಾಂಕ : 26–2–2013ರ ಪತ್ರದೊಂದಿಗೆ ಕಳುಹಿಸಿರುವ ಕರ್ನಾಟಕ ಉಪ ಲೋಕಾಯುಕ್ತರು– II ರವರ ದಿನಾಂಕ : 21–2–2013 ವರದಿಯಲ್ಲಿ ಶ್ರೀ ಎಲ್.ಸಿ. ಪಾಂಡುರಂಗಪ್ಪ, ದ್ವಿತೀಯ ದರ್ಜೆ ಸಹಾಯಕ, ಉಪ ಖಜಾನೆ, ಕಡೂರು ಇವರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಮಂಜಪ್ಪ, ಉಪನ್ಯಾಸಕರು, ಸರ್ಕಾರಿ ಪದವಿ ಪೂರ್ವ ಕಾಲೇಜು, ಕಡೂರು ಇವರ 2010–11ನೇ ಸಾಲಿನ ಗಳಿಕೆ ರಜೆ ನಗದೀಕರಣ ಬಿಲ್ಲಿನ ಪಾವತಿಯ ಸಂಬಂಧವಾಗಿ ಇವರಿಂದ ದಿನಾಂಕ : 9–9–2010 ರಂದು ರೂ. 350/–ಗಳ ಲಂಚ ಪಡೆಯುವ ಸಮಯದಲ್ಲಿ ಲೋಕಾಯುಕ್ತ ಪೊಲೀಸರ ಬಲೆಗೆ ಸಿಲುಕಿದ್ದು, ಈ ಬಗ್ಗೆ ನಡೆದ ಮುಂದಿನ ತನಿಖೆಯಿಂದಾಗಿ ಸಂಗ್ರಹವಾಗಿರುವ ಸಂಗತಿಗಳು, ಮಾಹಿತಿ, ದಾಖಲೆಗಳ ಆಧಾರಗಳಿಂದ ಸದರಿ ನೌಕರರು ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಗಳು 1966ರ ನಿಯಮ 3(1)ರಡಿಯಲ್ಲಿ ಉಕ್ತವಾದ ದುರ್ನಡತೆ ಎಸಗಿರುವುದು ಮೇಲ್ನೋಟಕ್ಕೆ ಸ್ಥಿರಪಟ್ಟಿದ್ದು ಸದರಿ ದುರ್ನಡತೆ ಸಂಬಂಧದಲ್ಲಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14–ಎ ರನ್ವಯ ಪ್ರಕರಣವನ್ನು ಉಪ ಲೋಕಾಯುಕ್ತರು– II ಕ್ಕೆ ವಹಿಸುವಂತೆ ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಪ್ರಕರಣವನ್ನು ಪೂರ್ಣ ಪ್ರಮಾಣದ ವಿಚಾರಣೆಗಾಗಿ ಸನ್ಮಾನ್ಯ ಉಪ ಲೋಕಾಯುಕ್ತರು– II ಅವರಿಗೆ ವಹಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 47 ಆಖಇ 2013, ಬೆಂಗಳೂರು, ದಿನಾಂಕ : 20–3–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14–ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಲ್.ಸಿ. ಪಾಂಡುರಂಗಪ್ಪ, ದ್ವಿತೀಯ ದರ್ಜೆ ಸಹಾಯಕ, ಉಪ ಖಜಾನೆ, ಕಡೂರು ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ವಿಚಾರಣೆಯನ್ನು ಗೌರವಾನ್ವಿತ ಉಪ ಲೋಕಾಯುಕ್ತರು– II ಅವರ ಮೂಲಕ ನಡೆಯಬೇಕೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ).

**P.R. 454**

## ವಸತಿ ಸಚಿವಾಲಯ

**ವಿಷಯ :** ಕರ್ನಾಟಕ ಗೃಹ ಮಂಡಳಿಯು ಆನೇಕಲ್ ತಾಲ್ಲೂಕಿನ ಸೂರ್ಯನಗರ 4ನೇ ಹಂತದ ವಸತಿ ಯೋಜನೆ ಕೈಗೊಳ್ಳಲು ಅನುಮೋದನೆ ನೀಡುವ ಬಗ್ಗೆ

**ಓದಲಾಗಿದೆ :** ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಇವರ ಕಛೇರಿಯ ಪತ್ರ ಸಂಖ್ಯೆ : ಕಗೃಮಂ/ವಿಭೂಸ್ವಾಅ/ ಸೂರ್ಯನಗರ4ನೇಹಂತ/2012–13, ದಿನಾಂಕ : 13–3–13.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ಗೃಹ ಮಂಡಳಿಯ ಆಯುಕ್ತರು ಪ್ರಸ್ತಾವನೆ ಸಲ್ಲಿಸುತ್ತಾ, ಕರ್ನಾಟಕ ಗೃಹ ಮಂಡಳಿ ವತಿಯಿಂದ ಆನೇಕಲ್ ತಾಲ್ಲೂಕಿನಲ್ಲಿ ಈಗಾಗಲೇ ಸೂರ್ಯನಗರ 1, 2 ಮತ್ತು 3ನೇ ಹಂತದಲ್ಲಿ ವಸತಿ ಬಡಾವಣೆಯನ್ನು ನಿರ್ಮಾಣ ಮಾಡಿದ್ದು ಹಂಚಿಕೆ ಪ್ರಕ್ರಿಯೆಯು ಸಹ ಪೂರ್ಣಗೊಂಡಿದೆ. ಸದರಿ ಪ್ರದೇಶದಲ್ಲಿ ವಸತಿಗೆ ತುಂಬಾ ಬೇಡಿಕೆಯಿರುವುದುದರಿಂದ, ಆನೇಕಲ್ ತಾಲ್ಲೂಕಿನಲ್ಲಿ ಸುಮಾರು 2404 ಎಕರೆ ಜಮೀನಿನಲ್ಲಿ ಸೂರ್ಯನಗರ 4ನೇ ಹಂತದ ವಸತಿ ಬಡಾವಣೆಯನ್ನು ನಿರ್ಮಾಣ ಮಾಡಲು ಉದ್ದೇಶಿಸಲಾಗಿದೆ. ಸದರಿ ಬಡಾವಣೆಗೆ "ಸ್ವಾಮಿ ವಿವೇಕಾನಂದ ಬಡಾವಣೆ" ಎಂದು ಹೆಸರಿಡಲು ಸಹ ತೀರ್ಮಾನಿಸಲಾಗಿದೆ. ಈ ವಿಷಯವನ್ನು ದಿನಾಂಕ : 18–4–2011ರಂದು ನಡೆದ 431ನೇ ಮಂಡಳಿ ಸಭೆಯಲ್ಲಿ ಚರ್ಚಿಸಿ, ಜಮೀನನ್ನು ಭೂಸ್ವಾಧೀನ ಪಡೆಯಲು ಭೂಸ್ವಾಧೀನ ಕಾಯ್ದೆ ಕಲಂ 4(1)ರಂತೆ ಅಧಿಸೂಚನೆ ಹೊರಡಿಸಲು ನಿರ್ಣಯಿಸಿರುತ್ತದೆ. ಈಗಾಗಲೇ ಸರ್ಕಾರಿ ಆದೇಶ ಸಂಖ್ಯೆ : ವಇ 248 ಕಗೃಮಂ 2011, ದಿನಾಂಕ : 4–9–2012ರ ಆದೇಶದಲ್ಲಿ 53 ವಸತಿ ಯೋಜನೆಯಡಿ ಆನೇಕಲ್ ತಾಲ್ಲೂಕಿನಲ್ಲಿ ಕೋನಸಂದ್ರ, ಬೊಮ್ಮಂಡಹಳ್ಳಿ, ಕಾಡಜಕ್ಕನಹಳ್ಳಿ, ಬಗ್ಗನದೊಡ್ಡಿ ಮತ್ತು ಇಂಡ್ಲವಾಡಿ ಗ್ರಾಮಗಳಲ್ಲಿಯ 300 ಎಕರೆ ಜಮೀನಿನಲ್ಲಿ ವಸತಿ ಯೋಜನೆಯನ್ನು ಹಮ್ಮಿಕೊಳ್ಳಲು ಸರ್ಕಾರದ ಅನುಮೋದನೆ ಪಡೆಯಲಾಗಿದೆ. ಅದರಂತೆ, ಉದ್ದೇಶಿತ ಸೂರ್ಯನಗರ 4ನೇ ಹಂತದ ವಸತಿ ಯೋಜನೆಯನ್ನು ತ್ವರಿತಗತಿಯಲ್ಲಿ ಅನುಷ್ಠಾನಗೊಳಿಸಲು ಸರ್ಕಾರ ಈಗಾಗಲೇ 2011–12ನೇ ಸಾಲಿಗೆ ಅನುಮೋದಿಸಿರುವ 53 ವಸತಿ ಯೋಜನೆಯಡಿ ಮೇಲೆ ತಿಳಿಸಲಾದ ಸರ್ಕಾರಿ ಆದೇಶದಲ್ಲಿ ಮಂಜೂರಾಗಿರುವ 300 ಎಕರೆ ಸೇರಿದಂತೆ, ಒಟ್ಟು 2404 ಎಕರೆ ಜಮೀನಿನಲ್ಲಿ ಅಂದಾಜು ಯೋಜನಾ ಮೊತ್ತ ರೂ. 3355.00 ಕೋಟಿಗಳ ಮೊತ್ತದಲ್ಲಿ ವಸತಿ ಯೋಜನೆಯನ್ನು ಕೈಗೊಳ್ಳಲು ಹಾಗೂ ಸದರಿ ಯೋಜನೆಗಾಗಿ ಜಮೀನು ಸಂಗ್ರಹಣೆ ಮಾಡಲು ಸರ್ಕಾರದ ಅನುಮೋದನೆ ನೀಡುವಂತೆ ಮಂಡಳಿಯ ಆಯುಕ್ತರು ಕೋರಿರುತ್ತಾರೆ.

ಆಯುಕ್ತರು, ಕರ್ನಾಟಕ ಗೃಹ ಮಂಡಳಿ ಅವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ವಇ 136 ಕಗೃಮಂ 2013, ಬೆಂಗಳೂರು, ದಿನಾಂಕ : 20–3–2013.**

ಮೇಲಿನ ಮಾಹಿತಿಗಳ ಹಿನ್ನೆಲೆಯಲ್ಲಿ, ಕರ್ನಾಟಕ ಗೃಹ ಮಂಡಳಿಯು ಆನೇಕಲ್ ತಾಲ್ಲೂಕಿನಲ್ಲಿ ಕೋನಸಂದ್ರ, ಬೊಮ್ಮಂಡಹಳ್ಳಿ, ಕಾಡಜಕ್ಕನಹಳ್ಳಿ, ಬಗ್ಗನದೊಡ್ಡಿ ಮತ್ತು ಇಂಡ್ಲವಾಡಿ ಗ್ರಾಮಗಳಲ್ಲಿ 2404 ಎಕರೆ ಜಮೀನಿನಲ್ಲಿ (53 ವಸತಿ ಯೋಜನೆಯ ಸರ್ಕಾರಿ ಆದೇಶ ಸಂಖ್ಯೆ : ವಇ 248 ಕಗೃಮಂ 2011, ದಿನಾಂಕ : 4–9–2012ರಲ್ಲಿ ಅನುಮೋದನೆಯಾಗಿರುವ 300 ಎಕರೆ ಜಮೀನನನ್ನು ಒಳಗೊಂಡಂತೆ) ಅಂದಾಜು ಯೋಜನಾ ವೆಚ್ಚ ರೂ. 3355.00 ಕೋಟಿಗಳ ಮೊತ್ತದಲ್ಲಿ ಸೂರ್ಯನಗರ 4ನೇ ಹಂತದ ವಸತಿ ಯೋಜನೆಯಾಗಿ ಯೋಜನೆಯನ್ನು ಹಮ್ಮಿಕೊಳ್ಳಲು ಕರ್ನಾಟಕ ಗೃಹ ಮಂಡಳಿ ಕಾಯ್ದೆ 1962ರ ಸೆಕ್ಷನ್ 20 ರಿಂದ 24ರನ್ವಯ, ಹಾಗೂ ಈ ಕೆಳಕಂಡ ಷರತ್ತುಗಳೊಂದಿಗೆ ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

1. ಇದರೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ತಿಳಿಸಿರುವ ಅಂಶಗಳಂತೆ ಯೋಜನೆಗಳನ್ನು ಅನುಷ್ಠಾನಗೊಳಿಸತಕ್ಕದ್ದು.
2. ಈ ಯೋಜನೆಯನ್ನು ಕಾರ್ಯಗತಗೊಳಿಸುವ ಮುನ್ನ ಅಗತ್ಯ ತಾಂತ್ರಿಕ ಮತ್ತು ಆರ್ಥಿಕ ಕಾರ್ಯಸಾಧ್ಯತೆಯ ಬಗ್ಗೆ ಪರಿಶೀಲಿಸತಕ್ಕದ್ದು ಹಾಗೂ ಕರ್ನಾಟಕ ಪಾರದರ್ಶಕ ಕಾಯ್ದೆಯನ್ವಯ ಕಾರ್ಯಗತಗೊಳಿಸತಕ್ಕದ್ದು.
3. ಕರ್ನಾಟಕ ಗೃಹ ಮಂಡಳಿ ಕಾಯ್ದೆಯನ್ನು ಚಾಚೂ ತಪ್ಪದೇ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಸಿ.ಎಸ್. ಶಿವಕುಮಾರಸ್ವಾಮಿ,**
ಪೀಠಾಧಿಕಾರಿ–3,
ವಸತಿ ಇಲಾಖೆ.

ಸರ್ಕಾರಿ ಆದೇಶ ಸಂಖ್ಯೆ : ವಇ 136 ಕಗೃಮಂ 2013, ದಿನಾಂಕ : 20–3–2013ಕ್ಕೆ

ಅನುಬಂಧ

ಕರ್ನಾಟಕ ಗೃಹ ಮಂಡಳಿಯು ಸೂರ್ಯನಗರ 4ನೇ ಹಂತದಲ್ಲಿ ಕೈಗೊಳ್ಳುವ ವಸತಿ ಯೋಜನೆಗಳ ವೈಶಿಷ್ಟ್ಯ ಇತ್ಯಾದಿಗಳ ವಿವರಗಳು

(i) **ಜಮೀನನ್ನು ಪಡೆಯುವುದು :–**

ಕರ್ನಾಟಕ ಗೃಹ ಮಂಡಳಿ ಕಾಯ್ದೆ ಸೆಕ್ಷನ್ 33ರನ್ವಯ, ಜಮೀನನ್ನು ಭೂಸ್ವಾಧೀನ ಕಾಯ್ದೆಯಡಿ ಸರ್ಕಾರದ ಆದೇಶ ಸಂಖ್ಯೆ : ವಇ 313 ಕಗೃಮಂ 2012ರಲ್ಲಿ ತಿಳಿಸಿರುವಂತೆ ಸ್ವಾಧೀನಪಡಿಸಿಕೊಳ್ಳಲು, ಸದರಿ ಯೋಜನೆಯ ಅಭಿವೃದ್ಧಿ ಮತ್ತು ಮಾರಾಟ ಕಾರ್ಯಗಳಿಗಾಗಿ ಕರ್ನಾಟಕ ಗೃಹ ಮಂಡಳಿಯು ಸ್ವಂತ ಹಣಕಾಸಿನ ವ್ಯವಸ್ಥೆಯನ್ನು ಕಲ್ಪಿಸತಕ್ಕದ್ದು.

(ii) **ರೂಪಿಸಲಿರುವ ಬಡಾವಣೆಯ ವೈಶಿಷ್ಟ್ಯಗಳು :–**

- ಸಮಾಜದಲ್ಲಿ ಆರ್ಥಿಕವಾಗಿ ಹಿಂದುಳಿದ, ಮತ್ತು ಕಡಿಮೆ ಆದಾಯ ವರ್ಗದ ಜನರಿಗೆ ಶೇ. 15 ರಿಂದ 20 ರವರೆಗೆ ಮೀಸಲಿರಿಸುವುದು ಸೇರಿದಂತೆ, ಆರ್ಥಿಕವಾಗಿ ಹಿಂದುಳಿದವರಿಗೆ ಶೇ. 50ರ ರಿಯಾಯ್ತಿ ದರದಲ್ಲಿ ಒದಗಿಸುವುದರ ಜೊತೆಗೆ ಒಟ್ಟಾರೆ ಎಲ್ಲಾ ವರ್ಗದ ಜನರಿಗೆ ಸೂಕ್ತವಾದ ವಸತಿಯನ್ನು ಒದಗಿಸುವುದು.
- ಉತ್ತಮ ರಸ್ತೆ, ನೀರು, ವಿದ್ಯುತ್ ಪೂರೈಕೆ ಮತ್ತು ಸ್ಯಾನಿಟರಿ ಸೌಲಭ್ಯಗಳು.
- ಸೀವೇಜ್ ಟ್ರೀಟ್‌ಮೆಂಟ್ ಮತ್ತು ಪವರ್ ಸಬ್ ಸ್ಟೇಷನ್‌ಗಳು, ಶಾಲೆ ಇತ್ಯಾದಿ ಸಾರ್ವಜನಿಕ ಸೌಕರ್ಯಗಳಿಗೆ ಸಾಕಷ್ಟು ಸ್ಥಳಾವಕಾಶ ಕಲ್ಪಿಸುವುದು.
- ಕನಿಷ್ಠ ಸೌಲಭ್ಯಗಳಾದ ಸಾರಿಗೆ, ಆರೋಗ್ಯ, ಅಂಚೆ ಕಛೇರಿ, ಪೊಲೀಸ್ ಠಾಣೆ, ಬ್ಯಾಂಕ್, ವಾಣಿಜ್ಯ ಸಂಕೀರ್ಣ ಮತ್ತು ವಿದ್ಯಾಸಂಸ್ಥೆಗಳಿಗೆ ಅವಕಾಶ ಕಲ್ಪಿಸುವುದು.
- ವಿಶೇಷ ಲಕ್ಷಣಗಳು : ಮಳೆ ನೀರು ಸಂಗ್ರಹಣೆ, ಕೆರೆಗಳ ಮರುಪೂರಣ, ಭೂ–ಅಲಂಕಾರೋದ್ಯಾನ ರಚನೆ ಇತ್ಯಾದಿ ಕ್ರಮಗಳನ್ನು ಕೈಗೊಳ್ಳತಕ್ಕದ್ದು.
- ಬಡಾವಣೆಗಳು ಸ್ಥಳೀಯ CDP/ODP/Master Plan/ವಲಯ ನಿಯಮಾವಳಿಗಳನ್ವಯ ಸಂಬಂಧಪಟ್ಟ ಯೋಜನಾ/ಅಭಿವೃದ್ಧಿ ಪ್ರಾಧಿಕಾರಿಗಳು ಭೂ–ಉಪಯೋಗಕ್ಕೆ ಸಂಬಂಧಿಸಿದಂತೆ ವಿಧಿಸುವ ಷರತ್ತುಗಳಿಗೆ ಅನುರೂಪವಾಗಿರುವುದು ಹಾಗೂ ಉದ್ದೇಶಿತ ವಸತಿ ಯೋಜನಾ ಪ್ರದೇಶವು ಸ್ಥಳಿಯ ಅಭಿವೃದ್ಧಿ/ಯೋಜನಾ ಪ್ರಾಧಿಕಾರದ ವ್ಯಾಪ್ತಿಯ ಅಥವಾ ಮಾಸ್ಟರ್ ಪ್ಲಾನ್ ಅಡಿಯಲ್ಲಿ ಬರದಿದ್ದ ಸಂದರ್ಭದಲ್ಲಿ ಈ ಕೆಳಗೆ ತೋರಿಸಿರುವಂತೆ ಭೂ–ಉಪಯೋಗದ ಆಧಾರದ ಮೇಲೆ ಬಡಾವಣೆಗಳನ್ನು ರಚಿಸುವುದು.

| ಕ್ರಮ ಸಂಖ್ಯೆ | ಭೂ–ಉಪಯೋಗ | ಒಟ್ಟು ಸ್ಥಳದ ಶೇಕಡವಾರು |
|---|---|---|
| 1. | ವಾಸಕ್ಕೆ | 50–55 |
| 2. | ವಾಣಿಜ್ಯ | 2–3 |
| 3. | ಸಾರ್ವಜನಿಕ/ಅರೆ ಸಾರ್ವಜನಿಕ | 5–10 |
| 4. | ಉದ್ಯಾನ ಮತ್ತು ಬಯಲು ಪ್ರದೇಶ | ಕನಿಷ್ಠ 10 |
| 5. | ರಸ್ತೆಗಳು | 22–30 |

(III) **ಪ್ರಮುಖ ತಾಂತ್ರಿಕ ಲಕ್ಷಣಗಳು :–**

- ಯೋಜನೆಗಳ ಕಾಮಗಾರಿಯನ್ನು ಕರ್ನಾಟಕ ಪಾರದರ್ಶಕ ಕಾಯ್ದೆಯನ್ವಯ, ಗುತ್ತಿಗೆಗೆ ವಹಿಸಲು ಕ್ರಮ ವಹಿಸುವುದು.
- ವಿಸ್ತೃತ ಯೋಜನಾ ವರದಿ (DPR) ಯನ್ನು ಪೂರ್ವಾರ್ಹತೆ ಪಡೆದಿರುವ ವಾಸ್ತುಶಿಲ್ಪ ಮತ್ತು ಇಂಜಿನಿಯರಿಂಗ್ ಸಂಸ್ಥೆಗಳಿಂದ ತಯಾರಿಸುವುದು.
- ಈ ಯೋಜನೆಗಳ ಮೇಲುಸ್ತುವಾರಿಯನ್ನು ಪೂರ್ವಾರ್ಹತೆ ಪಡೆದ, ವೃತ್ತಿಪರ ಪ್ರಸಿದ್ಧ ಪ್ರಾಜೆಕ್ಟ್ ಮ್ಯಾನೇಜ್‌ಮೆಂಟ್ ಕನ್ಸಲ್ಟೆಂಟ್ (PMCs) ಗಳಿಂದ ಮಾಡಿಸಲಾಗುವುದು.
- ಈ ಯೋಜನೆಗಳನ್ನು ಪೂರ್ವಾರ್ಹತೆ ಪಡೆದ 'ಟರ್ನ್‌ಕೀ' ಗುತ್ತಿಗೆದಾರರಿಗೆ ವಹಿಸಲಾಗುವುದು. ಯೋಜನೆಗಳಲ್ಲಿನ ಎಲ್ಲಾ ಸಿವಿಲ್ ಕಾಮಗಾರಿಗಳು, ರಸ್ತೆಗಳು ವಿದ್ಯುತ್‌ಚ್ಛಕ್ತಿ, ನೀರು ಸರಬರಾಜು, ನೈರ್ಮಲ್ಯ ಮತ್ತು ಒಳಚರಂಡಿ ವ್ಯವಸ್ಥೆ, ಮತ್ತು ಸೀವೇಜ್ ಟ್ರೀಟ್‌ಮೆಂಟ್, ಭೂಅಲಂಕಾರ, ಉದ್ಯಾನ ಮತ್ತು ಬಯಲು ಪ್ರದೇಶದ ಅಭಿವೃದ್ಧಿಯೊಳಗೊಂಡ ಕಾಮಗಾರಿಗಳನ್ನು ಇವರುಗಳು ನಿರ್ವಹಿಸುವರು.
- ಯೋಜನೆಗಳನ್ನು ಕಾರ್ಯಪಾಲಕ ಅಭಿಯಂತರರ ನೇತೃತ್ವದಲ್ಲಿರುವ "ಪ್ರಾಜೆಕ್ಟ್ ಮಾನಿಟರಿಂಗ್ ಕಮಿಟಿ"ಯು ಉಸ್ತುವಾರಿ ಮಾಡುತ್ತದೆ. ಈ ಸಮಿತಿಯಲ್ಲಿ ಆರ್ಕಿಟೆಕ್ಟ್, ಪ್ರಾಜೆಕ್ಟ್ ಮ್ಯಾನೇಜ್‌ಮೆಂಟ್ ಕನ್ಸಲ್‌ಟೆಂಟ್, ಗುತ್ತಿಗೆದಾರ ಮತ್ತು ಹಂಚಿಕೆದಾರರ ಪ್ರತಿನಿಧಿಗಳು ಸದಸ್ಯರಾಗಿರುತ್ತಾರೆ.
- 'ಟರ್ನ್‌ಕೀ' ಗುತ್ತಿಗೆ ಮಾಡುವಾಗ 2 ವರ್ಷದ ದೋಷ–ನಿವಾರಣಾ ಹೊಣೆಗಾರಿಕೆ ಮತ್ತು ಇದೇ ವೇಳೆಯಲ್ಲಿ ನೈಜ ವೆಚ್ಚದ ಆಧಾರದ ಮೇಲೆ 2 ವರ್ಷದ ಅವಧಿಗೆ ಕಸ ವಿಲೇವಾರಿ, ಬೀದಿ ದೀಪ ಮತ್ತು ರಸ್ತೆ ನಿರ್ವಹಣೆ, ನೀರು ಪೂರೈಕೆ ಹಾಗೂ ಬಡಾವಣೆಯ ಸುರಕ್ಷತೆ ಮತ್ತು ಇತರೆ ಸಾಮಾನ್ಯ ನಿರ್ವಹಣೆಗಳನ್ನು ಮಾಡುವಂತೆ ಷರತ್ತುಗಳನ್ನು ವಿಧಿಸಲಾಗುವುದು.
- ಕಾಮಗಾರಿಗಳನ್ನು ಬೇಗನೆ ಪೂರೈಸುವ ಗುತ್ತಿಗೆದಾರರಿಗೆ ಪ್ರೋತ್ಸಾಹಧನ ನೀಡಲಾಗುವುದು ಹಾಗೆಯೇ, ವಿಳಂಬ ಉಂಟಾದಲ್ಲಿ ದಂಡ ವಿಧಿಸಲಾಗುವುದು.
- ಮೂರನೇ ವ್ಯಕ್ತಿ ತಪಾಸಣೆ.

(IV) **ಹಣಕಾಸು :–**

ಕರ್ನಾಟಕ ಗೃಹ ಮಂಡಳಿಯ ವಸತಿ ಯೋಜನೆಗಳಿಗೆ ವಾಣಿಜ್ಯ ಬ್ಯಾಂಕುಗಳು/ಹಣಕಾಸು ಸಂಸ್ಥೆಗಳಿಂದ ಪಡೆಯುವ ಸಾಲದಿಂದ ಹಣ ಹೂಡಿಕೆ ಮಾಡುವುದರಿಂದ, ಸರ್ಕಾರದ ಹಣಕಾಸಿನ ಪಾಲ್ಗೊಳ್ಳುವಿಕೆಯು ಇರುವುದಿಲ್ಲ ಮತ್ತು ಇಂತಹ ಸಾಲಗಳ ಮೇಲೆ ಸರ್ಕಾರದ ಖಾತರಿ ನೀಡುವ ಅಗತ್ಯತೆಯೂ ಇರುವುದಿಲ್ಲ.

(V) **ನಿವೇಶನ/ಮನೆಗಳ ಹಂಚಿಕೆ :–**

- ಈ ಸ್ವತ್ತುಗಳ ಹಂಚಿಕೆ ಸಮಯದಲ್ಲಿ ಹಂಚಿಕೆಯ ಅಂತಿಮ ದರವನ್ನು ಮಂಡಳಿಯು ಪ್ರಕಟಿಸುವುದು
- ಹಂಚಿಕೆದಾರರು ನಿವೇಶನ/ ಮನೆಯ ದರವನ್ನು ನಾಲ್ಕು ಕಂತುಗಳಲ್ಲಿ ನಾಲ್ಕು ತಿಂಗಳುವರೆವಿಗೂ ಪಾವತಿಸಬಹುದಾಗಿದೆ.
- ಸಾಲ ಸೌಲಭ್ಯವನ್ನು ವಾಣಿಜ್ಯ ಬ್ಯಾಂಕುಗಳ ಸಹಯೋಗದೊಂದಿಗೆ ಒದಗಿಸುವುದು.
- ಶೇ. 100 ರಷ್ಟು ಮೊತ್ತವನ್ನು ಪ್ರಥಮ ಕಂತಿನಲ್ಲಿ ಪಾವತಿ ಮಾಡುವವರಿಗೆ ವಿಶೇಷ ಪ್ರೋತ್ಸಾಹಗಳನ್ನು ನೀಡುವುದು.
- ಯೋಜನೆಯು ಮುಕ್ತಾಯಗೊಳ್ಳುವ ಮುನ್ನವೇ ನಿವೇಶನ/ಮನೆ/ಫ್ಲಾಟ್‌ಗಳ ಹಂಚಿಕೆಗಳನ್ನು ಮಾಡುವುದು.

**ಸಿ.ಎಸ್. ಶಿವಕುಮಾರಸ್ವಾಮಿ,**
ಪೀಠಾಧಿಕಾರಿ–3,
ವಸತಿ ಇಲಾಖೆ

**P.R. 449**
**SC - 100**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವದಲ್ಲಿ (ಪಿಪಿಪಿ) ಕನ್ನಡ ಗಂಗಾ ಯೋಜನೆ–ಘಟ್ಟ–1 (ಬಿಜಾಪುರ ಜಿಲ್ಲೆಯ ನಗರ ಮತ್ತು ಗ್ರಾಮಗಳಿಗೆ, ಸಮಗ್ರ ಕುಡಿಯುವ ನೀರು ಸರಬರಾಜು ಯೋಜನೆ) ಯನ್ನು ಅನುಷ್ಠಾನಗೊಳಿಸುವುದು.

**ಓದಲಾಗಿದೆ :** ವ್ಯವಸ್ಥಾಪಕ ನಿರ್ದೇಶಕರು, ಕನನೀಸ ಮತ್ತು ಒಚ ಮಂಡಳಿರವರ ಪತ್ರ ಸಂಖ್ಯೆ : ಕಜಮಂ/ತಾಂತ್ರಿಕ/ಸಮಗ್ರ ನೀಸಯೋ/ 445/2011–12, ದಿನಾಂಕ : 17–5–2011.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯ ಸರ್ಕಾರವು, ರಾಜ್ಯದ ಎಲ್ಲಾ ನಾಗರೀಕರಿಗೆ ಸುರಕ್ಷಿತ ಕುಡಿಯುವ ನೀರನ್ನು ಪೂರೈಸಲು ಬದ್ಧವಾಗಿದ್ದು, ಈ ನಿಟ್ಟಿನಲ್ಲಿ ವ್ಯವಸ್ಥಿತ ಸಂಸ್ಥೆಗಳ ಕ್ರಮವನ್ನು ಪರಿಶೀಲಿಸಿ ಗುಣಮಟ್ಟ, ಸೇವೆಗಳ ಲಭ್ಯತೆಗಳನ್ನು ವೃದ್ಧಿಗೊಳಿಸುವ ದೃಷ್ಟಿಯಿಂದ ಅನೇಕ ಪುನರ್‌ವಿಮರ್ಶೆಗಳ ಕ್ರಮಕೈಗೊಳ್ಳುತ್ತಿದೆ. ರಾಷ್ಟ್ರೀಯ ಮತ್ತು ರಾಜ್ಯ ನೀರಿನ ಕಾರ್ಯನೀತಿಗಳಡಿ ಕುಡಿಯುವ ನೀರಿಗೆ ಮೊದಲ ಆದ್ಯತೆ ನೀಡಲಾಗಿದೆ. ಈ ನಿಟ್ಟಿನಲ್ಲಿ ಮಾನ್ಯ ಮುಖ್ಯ ಮಂತ್ರಿಗಳು, ರಾಜ್ಯದ 2008–09ನೇ ಸಾಲಿನ ಆಯವ್ಯಯ ಮಂಡನೆಯಲ್ಲಿ ಕೊಳವೆಗಳ ಮೂಲಕ ನೀರು ಸರಬರಾಜು ಮಾಡುವ ಯೋಜನೆಯಡಿ ಕುಡಿಯುವ ನೀರನ್ನು ನದಿ ಮತ್ತು ಜಲಾಶಯಗಳಿಂದ ನಗರ ಮತ್ತು ಗ್ರಾಮಾಂತರ ಪ್ರದೇಶಗಳಿಗೆ ವಿತರಿಸಲು ಪ್ರಾಯೋಗಿಕವಾಗಿ ತೆಗೆದುಕೊಳ್ಳಲು ಘೋಷಿಸಿ ಕನ್ನಡ ಗಂಗಾ ಯೋಜನೆಯಡಿ. ಬಿಜಾಪುರ ಮತ್ತು ಚಿತ್ರದುರ್ಗ ಜಿಲ್ಲೆಯ ಎಲ್ಲಾ ನಗರ ಹಾಗೂ ಗ್ರಾಮೀಣ ಪ್ರದೇಶಗಳಿಗೆ ನೇರವಾಗಿ ಸಮಗ್ರ ಕುಡಿಯುವ ನೀರನ್ನು ಸರಬರಾಜು ಮಾಡುವ ಪ್ರಾಯೋಗಿಕ ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರದ ಆದೇಶ ಸಂಖ್ಯೆ : ನಅಇ 113 ಪಿಆರ್‌ಜೆ 2008, ಬೆಂಗಳೂರು ದಿನಾಂಕ : 16–2–2009ರಲ್ಲಿ ಮಂಜೂರು ಮಾಡಲಾಗಿದೆ. ಸದರಿ ಯೋಜನೆಯ ಅಭಿವೃದ್ಧಿ ಕಾಮಗಾರಿಗಳ ಪರಿವೀಕ್ಷಣೆ ಮಾಡಲು ನೋಡೆಲ್ ಏಜೆನ್ಸಿಯಾಗಿ ಕೆ.ಯು.ಐ.ಡಿ.ಎಫ್.ಸಿ., ಸಂಸ್ಥೆಯನ್ನು ನಿಯೋಜಿಸಲಾಗಿದೆ. ಅದರಂತೆ, ಬಿಜಾಪೂರ ಮತ್ತು ಚಿತ್ರದುರ್ಗ ಜಿಲ್ಲೆಗಳಿಗೆ ಸಮಗ್ರ ನೀರು ಸರಬರಾಜು ಯೋಜನೆ ಅಭಿವೃದ್ಧಿಪಡಿಸುವ ಕಾಮಗಾರಿಗಳ ಯೋಜನಾ ಸಾಧ್ಯತಾ ವರದಿಯನ್ನು ಮೆ॥ ಕೆ.ಯು.ಐ.ಡಿ.ಎಫ್.ಸಿ ಯಿಂದ ತಯಾರಿಸಲಾಗಿದೆ.

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿನ ಉನ್ನತ ಮಟ್ಟದ ಸಮಿತಿಯು (ಹೆಚ್.ಎಲ್.ಸಿ) ಯೋಜನೆಯ ಅಭಿವೃದ್ಧಿ ಕಾರ್ಯಗಳನ್ನು ನಿಗವಹಿಸುತ್ತಿದ್ದು. ಮುಖ್ಯ ಅಭಿಯಂತರರು, ಜಲಸಂಪನ್ಮೂಲ ಅಭಿವೃದ್ಧಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ "ತಾಂತ್ರಿಕ ಉಪ ಸಮಿತಿ" ಯು (TSC) ಉನ್ನತ ಮಟ್ಟದ ಸಮಿತಿಗೆ ಯೋಜನೆಯ ಎಲ್ಲಾ ತಾಂತ್ರಿಕ ವಿಷಯದಲ್ಲಿ ನೆರವಾಗಲು ರಚಿಸಲಾಗಿದೆ.

ಬಿಜಾಪೂರ ಮತ್ತು ಚಿತ್ರದುರ್ಗ ಜಿಲ್ಲೆಗಳಿಗೆ ಅಂತಿಮ ಯೋಜನಾ ಸಾಧ್ಯತಾ ವರದಿಯನ್ನು ತಯಾರಿಸಲಾಗಿದ್ದು. ಸದರಿ ವರದಿಯನ್ನು ತಾಂತ್ರಿಕ ಉಪ–ಸಮಿತಿಯು ಪರಿಶೀಲಿಸಿದೆ. ಅಂತಿಮ ಯೋಜನಾ ಸಾಧ್ಯತಾ ವರದಿ ಅನುಸಾರ, ಬಿಜಾಪುರ ಮತ್ತು ಚಿತ್ರದುರ್ಗ ಜಿಲ್ಲೆಗಳ ಯೋಜನೆಯ ಅಂದಾಜು ಕ್ರಮವಾಗಿ ಸುಮಾರು ರೂ. 885.00 ಮತ್ತು ರೂ. 2274.00 ಕೋಟಿಗಳಾಗಿರುತ್ತದೆ. ಬಿಜಾಪೂರ ಜಿಲ್ಲೆಗೆ ಕುಡಿಯುವ ನೀರಿನ ಮೂಲವು ಆಲಮಟ್ಟಿ ಮತ್ತು ನಾರಾಯಣಪುರ ಜಲಾಶಯಗಳನ್ನು ಮತ್ತು ಚಿತ್ರದುರ್ಗ ಜಿಲ್ಲೆಗೆ ಭದ್ರಾ ಜಲಾಶಯವನ್ನು ಪರಿಗಣಿಸಲಾಗಿದೆ. ಮೇಲ್ಕಂಡ ಜಲಾಶಯದಿಂದ ಸ್ಥಳೀಯ ಸಂಸ್ಥೆಗಳಿಗೆ ಮತ್ತು ಹಳ್ಳಿಗಳಿಗೆ ನೀರು ಸರಬರಾಜು ಮಾಡಲು ಚಾಲ್ತಿಯಲ್ಲಿರುವ ಹಾಗೂ ಪ್ರಗತಿಯಲ್ಲಿರುವ ಯೋಜನೆಗಳನ್ನು ಉಪಯೋಗಿಸಿಕೊಳ್ಳಲಾಗಿದೆ. ಸದರಿ ಯೋಜನೆಯನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ (PPP) ಅನುಷ್ಠಾನಗೊಳಿಸಲು ಪ್ರಸ್ತಾಪಿಸಲಾಗಿದೆ. ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯನ್ನು "Transmission Entity" ಯಾಗಿ ನಿಯೋಜಿಸಲಾಗಿದೆ. ಸದರಿ ಯೋಜನೆಯ ಪ್ರಸ್ತಾವನೆಗಳನ್ನು, ಟೆಂಡರ್ ಪ್ರಕ್ರಿಯೆ (RFQ & RFP) ಇತ್ಯಾದಿಗಳ ತಯಾರಿಕೆಗೆ, ತಾಂತ್ರಿಕ ಸಲಹೆಗಾರರನ್ನಾಗಿ ಮತ್ತು ಯೋಜನಾಭಿವೃದ್ಧಿ ಚಟುವಟಿಕೆಗಳಲ್ಲಿ ನೆರವಾಗಲು ಸಮಾಲೋಚಕ ಸಂಸ್ಥೆಯನ್ನಾಗಿ ಮೆ॥ ಇನ್ಫ್ರಾಸ್ಟ್ರಕ್ಚರ್ ಡೆವಲಪ್‌ಮೆಂಟ್ ಕಾರ್ಪೋರೇಷನ್ (ಕರ್ನಾಟಕ) ಲಿ., (ಮೆ॥ iDeCK) ಸಂಸ್ಥೆಯನ್ನು ನೇಮಿಸಲಾಗಿದೆ.

ಚಿತ್ರದುರ್ಗ ಜಿಲ್ಲೆಗೆ ಭದ್ರಾ ಮೇಲ್ದಂಡೆ ಯೋಜನೆಯಿಂದ, ನೀರು ಸರಬರಾಜು ಮಾಡುವ ಕುರಿತಂತೆ ಜಲಸಂಪನ್ಮೂಲ ಇಲಾಖೆಯಿಂದ ಯಾವುದೇ ಮಾಹಿತಿ ಸ್ವೀಕರಿಸಲಾಗಿರುವುದಿಲ್ಲ. ಮೇಲಾಗಿ ಈ ಯೋಜನೆಯ ಅಂದಾಜು ವೆಚ್ಚವು ಅಧಿಕವಾಗಿದ್ದು. ಆರ್ಥಿಕವಾಗಿ ಯೋಜನೆಯನ್ನು ಭರಿಸಲು ಸಾಧ್ಯವಾಗುತ್ತಿಲ್ಲ. ಇದಲ್ಲದೆ, 10ನೇ ರಾಜ್ಯ ಮಟ್ಟದ ಏಕಗವಾಕ್ಷಿ ಸಮಿತಿಯ ಸಭೆಯಲ್ಲಿ ಎರಡು ಜಿಲ್ಲೆಗಳಿಗೆ ನೀರನ್ನು ಸರಬರಾಜು ಮಾಡುವ ಪ್ರಸ್ತಾವನೆಯನ್ನು

ಎರಡು ಪ್ರತ್ಯೇಕ ಯೋಜನೆಗಳಾಗಿ ಪರಿಗಣಿಸಬೇಕಾಗಿರುತ್ತದೆ. ಇದರಿಂದಾಗಿ ಪ್ರತಿಯೊಂದು ಯೋಜನೆಯ ಕಾರ್ಯಸಾಧ್ಯತೆಯನ್ನು ಅದರ ಅರ್ಹತೆಯ ಮೇಲೆ ನಿರ್ಧರಿಸಬಹುದು ಇದಲ್ಲದೆ ಬಂಡವಾಳ ಮತ್ತು ನಿರ್ವಹಣಾ ವೆಚ್ಚಗಳನ್ನು ಪರಿಷ್ಕರಿಸುವ ಮೂಲಕ ಈ ಯೋಜನೆಗಳ ಕಾರ್ಯಸಾಧ್ಯತೆಗಳನ್ನು ಪರಿಗಣಿಸಲು ಹಾಗೂ, ಪ್ರಸ್ತುತ ಬಿಜಾಪೂರ ಜಿಲ್ಲೆಗೆ ಮಾತ್ರ ಪ್ರಾಯೋಗಿಕವಾಗಿ ಪಿಪಿಪಿ ಆಧಾರದ ಮೇಲೆ ಕುಡಿಯುವ ನೀರನ್ನು ಒದಗಿಸಲು ನಿರ್ಣಯಿಸಿದೆ.

ಮೆ॥ ಐಡೆಕ್, ಬೆಂಗಳೂರುರವರು ಯೋಜನೆಯ ಕಾರ್ಯಸಾಧ್ಯತೆಯನ್ನು ನಿರ್ಧರಿಸಲು ಪ್ರಾಥಮಿಕ ಆರ್ಥಿಕ ವಿಶ್ಲೇಷಣೆಯನ್ನು ಕೈಗೊಂಡಿದ್ದಾರೆ. ಯೋಜನೆಯ ಪರಿಣಾಮ ಮತ್ತು ಜಟಿಲತೆಯನ್ನು ಪರಿಗಣಿಸಿ, ಹಾಲಿ ಅಪರ ಮುಖ್ಯ ಕಾರ್ಯದರ್ಶಿರವರ ನೇತೃತ್ವದಲ್ಲಿ ಇರುವ ಸಮಿತಿಯನ್ನು ಚಾಲನಾ ಸಮಿತಿಯಾಗಿ ಪುನರ್ ರಚಿಸಲು ಉದ್ದೇಶಿಸಲಾಗಿದೆ. ಇದರಂತೆ, ಪ್ರಸ್ತುತ "ತಾಂತ್ರಿಕ ಉಪ ಸಮಿತಿಯನ್ನು" ಚಾಲನಾ ಸಮಿತಿಗೆ ತಾಂತ್ರಿಕ ವಿಷಯದಲ್ಲಿ ನೆರವಾಗಲು ಪುನರ್ ರಚಿಸಲು ಸಹ ಉದ್ದೇಶಿಸಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ನಅಇ 83 ಯುಎಂಎಸ್ 2010, ಬೆಂಗಳೂರು, ದಿನಾಂಕ : 20-3-2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕನ್ನಡ ಗಂಗಾ" ಹಂತ-1 ಯೋಜನೆಯಡಿ ಬಿಜಾಪುರ ಜಿಲ್ಲೆಗೆ ಸಮಗ್ರ ಕುಡಿಯುವ ನೀರು ಸರಬರಾಜು ಯೋಜನೆಯನ್ನು ಅಂದಾಜು ಮೊತ್ತ ರೂ. 885.00 ಕೋಟಿಗಳಲ್ಲಿ (ರೂ. ಎಂಟು ನೂರ ಎಂಬತ್ತೈದು ಕೋಟಿಗಳು ಮಾತ್ರ) ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಪ್ರಾಯೋಗಿಕವಾಗಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಈ ಕೆಳಕಂಡ ಷರತ್ತುಗಳನ್ವಯ ಕೈಗೆತ್ತಿಕೊಳ್ಳಲು ಸರ್ಕಾರವು ಅನುಮೋದನೆಯನ್ನು ನೀಡಿದೆ.

i) ಯೋಜನೆಯ ಅಂದಾಜಿನ ಶೇ. 20ರಷ್ಟು ಸರ್ಕಾರದ ಅನುದಾನದಿಂದ ಮತ್ತು ಬಾಕಿ ಶೇ. 80ರಷ್ಟು ಮೊತ್ತವನ್ನು ಖಾಸಗಿ ಬಂಡವಾಳ ಹೂಡಿಕೆದಾರರಿಂದ ಭರಿಸಲು ಹಾಗೂ ಬಂಡವಾಳ ಹೂಡಿಕೆದಾರರಿಗೆ 30 ವರ್ಷಗಳಲ್ಲಿ (3 ವರ್ಷ ನಿರ್ಮಾಣ ಅವಧಿ ಹೊರತು ಪಡಿಸಿ) ನಿರ್ವಹಣೆ ಅವಧಿಯಲ್ಲಿ ವಾರ್ಷಿಕ ಮಾದರಿಯಲ್ಲಿ (Annuity) ಮರು ಪಾವತಿಸಲು ಕ್ರಮ ವಹಿಸುವುದು.

ii) ಯೋಜನೆಯ ಆರ್ಥಿಕ ವಿಶ್ಲೇಷಣೆಗೆ ಸರ್ಕಾರದ ಪೂರ್ವಾನುಮೋದನೆ ಪಡೆಯತಕ್ಕದ್ದು ;

iii) ಬಿಜಾಪುರ ಜಿಲ್ಲೆಯ ಕುಡಿಯುವ ನೀರಿನ ಸಮಗ್ರ ಯೋಜನೆಗೆ ಅಗತ್ಯವಿರುವ 4.90 ಟಿ.ಎಂ.ಸಿ. ಪ್ರಮಾಣದ ನೀರನ್ನು ಕೃಷ್ಣಾ ನದಿಯಿಂದ ಪಡೆಯಲು ಜಲಸಂಪನ್ಮೂಲ ಇಲಾಖೆಯು ಸಹಮತಿ ನೀಡಿದೆ ;

iv) ಪ್ರಸ್ತುತ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ನೇತೃತ್ವದಲ್ಲಿ ಇರುವ ಸಮಿತಿಯನ್ನು ಚಾಲನಾ ಸಮಿತಿಯಂತೆ ಪುನರ್ ರಚಿಸಿ ಮುಂದುವರಿಸುವುದು. ಸದರಿ ಸಮಿತಿಯ ಸಂಯೋಜನೆ ಅನುಬಂಧ-1ರಲ್ಲಿ ಲಗತ್ತಿಸಲಾಗಿದೆ. ಸದರಿ ಸಮಿತಿಯು ಯೋಜನೆಯನ್ನು ಅನುಷ್ಠಾನಗೊಳಿಸಲು ಬೇಕಾದ ನಿರ್ಧಾರಗಳನ್ನು ಮತ್ತು ಕ್ರಮವನ್ನು ತೆಗೆದುಕೊಳ್ಳಲು ಅಧಿಕಾರವುಳ್ಳದಾಗಿರುತ್ತದೆ ;

v) ಪ್ರಸ್ತುತ ತಾಂತ್ರಿಕ ಉಪ-ಸಮಿತಿಯನ್ನು ಅನುಬಂಧ-2ರ ಸಂಯೋಜನೆಯಂತೆ ಮುಂದುವರೆಸುವುದು ಮತ್ತು ಸದರಿ ಸಮಿತಿಯು, ಯೋಜನೆ ಅನುಷ್ಠಾನಗೊಳಿಸಲು ಬೇಕಾದ ಎಲ್ಲಾ ತಾಂತ್ರಿಕ ಮತ್ತು ಕಾಂಟ್ರಾಕ್ಚ್ಯುಲ್ ಮತ್ತು ಇತರೆ ವಿಷಯಗಳಲ್ಲಿ ಸ್ಟೀರಿಂಗ್ ಕಮಿಟಿಗೆ ನೆರವಾಗುವುದು ;

vi) The tariff policy of G.O. No. UDD 07 UWS 2011, dated 20-7-2011 should be adopted by all the Local Bodies in the project area. This should include policy for public stand post to ensure access to poor and at the same time preventing wastage of water. Even though this G.O. is for ULBs, since the same level of service is to be provided to the rural local bodies same tariff shall be adopted for them too. Full commitment of the local bodies in this regard should be obtained as a pre-condition before implementation of the project ;

vii) The procurement related documents needs to be prepared. Being a PPP project,. it should be brought before the SLSWA committee for approval. The document will have to be submitted to Government before issue for clearance. The technical and financial criteria for qualification need to be worked out base on need of the project. The bid parameter needs to be worked out and proposed for concurrence ;

viii) The Government up front grant is limited to 20% of the project cost as estimated presently. The contract structuring should be done such that the project cost is plugged at the estimate made now by the Department and possible incentive for savings in the capital cost without compromising the technical, operational and performance requirement;

ix) All the existing and ongoing projects in Rural and Urban areas need to be taken in to consideration for this project to ensure their full utilisation. Thus the structure of the project should be such that duplication and over engineering is avoided ;

x) The cost of project-upfront grant and annuity should be shared proportionately by the Board for Urban areas and RDPR for rural areas, from out of their plan budget ;

xi) The schedule of project implementation could be approved later based on amounts available for implementation including firming up of Government of India share ;

xii) The possibility of implementing this scheme with the funds of NRDWP. NABARD, RIDF, HUDCO and Other departments may be examined ;

xiii) IDD shall take note of the reconstitution of the steering and technical sub-committees witht the IDD representatives on these committees ;

xiv) These committees would take care of the preparation, scrutiny and according approvals of the bidding documents like RFQ, RFP & DCA ;

xv) IDD would presume that, the nodal agency/transmission entity would get the DPR prepared, structure the project appropriately and evolve the proper bid parameters before going to the market inviting competitive bids ;

xvi) The project would be implemented after having convinced of the advantages of the PPP route after undertaking public sector comparator and value for money analysis.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಟಿ.ಎಂ. ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಅನುಬಂಧ–1

**Composition of the "Steering Committee"**

| | | |
|---|---|---|
| 1. | Additional Chief Secretary & Development Commissioner | Chairperson |
| 2. | Principal Secretary, Urban Development Department | Member |
| 3. | Principal Secretary, Rural Development & Panchayat Raj Department | Member |
| 4. | Principal Secretary, Water Resources Department | Member |
| 5. | Principal Secretary, Finance Department | Member |
| 6. | Secretary, Urban Development Department | Member |
| 7. | Secretary, Infrastructure Development Department | Member |
| 8. | Managing Director, Karnataka Urban Infrastructure Development and Finance Corporation (KUIDFC) | Member |
| 9. | The Economic Advisor to the Hon'ble Chief Minister | Member |
| 10. | Managing Director, Karnataka Urban Water Supply and Drainage Board (KUWS&DB) | Member Convener |

**Functions :**

1) Review progress of the project structuring and bid process management for selection of private developers for the project and resolve any problems encountered in this regard.
2) To approve the technical, financial and contractual issues required to implement the project.
3) Take any decisions for smooth structuring of the project.
4) To discuss with various domestic financial institutions to explore possibility of getting loan.
5) To conduct negotiations with the successful bidders.

**ಟಿ.ಎಂ. ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಅನುಬಂಧ–2

**Composition of the "Technical Sub-Committee"**

| | | |
|---|---|---|
| 1. | Chief Engineer, KUWS&DB | Chairman |
| 2. | Chief Engineer, WRDO | Member |
| 3. | Chief Engineer, PRED | Member |
| 4. | Advisor/Superintending Engineer, KUIDFC | Member |
| 5. | Dy. Secretary to Government Water Resource Department | Member |
| 6. | Director (Tech), PPP Cell, IDD | Member |
| 7. | Representative from iDeCK | Member |

| | | |
|---|---|---|
| 8. | Prof. Ramprasad, IISc, Retd. | Member |
| 9. | Prof. Subramanya, IISc., Retd. | Member |
| 10. | Srl. C.N. Babu, Chief Engineer, Retd. | Member |
| 11. | Superintending Engineer, KUWS&DB | Convener |

**Functions :**

1) To assist the Committee headed by the Additional Chief Secretary & Development Commissioner in all technical matters related to the projects.
2) To vet the pre-qualification criteria.
3) To assist KUWS&DB in evaluating Request for Qualification (RFQ).
4) To vet the Request for Proposal (RFP) and Concession Agreement (CA) documents.
5) To assist KUWS&DB in responding to queries of bidders on RFP and CA documents.
6) To assist KUWS&DB in evaluating RFP.

**ಟಿ.ಎಂ. ವಾಸುದೇವರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**P.R. 459**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಕೆ.ಜಿ. ಕೃಷ್ಣಮೂರ್ತಿ, ಹೆಚ್.ಸಿ. 25, ಬಸವನಹಳ್ಳಿ ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರ ಅದೇಶ ಸಂಖ್ಯೆ: ಡಿಇ/ 05/2011 (ಓಬಿ ಸಂಖ್ಯೆ: 246/2011) ದಿನಾಂಕ: 10–10–2011
2. ಮೇಲ್ಮನವಿ ಪ್ರಾಧಿಕಾರ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ–2/ಮೇಲ್ಮನವಿ/01/ಪವ–2011, ದಿನಾಂಕ: 09–10–2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 22–10–2012
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2) 50/2012–13, ದಿನಾಂಕ: 21–12–2012

**ಪ್ರಸ್ತಾವನೆ:**

ಶ್ರೀ ಕೆ.ಜಿ. ಕೃಷ್ಣಮೂರ್ತಿ, ಹೆಚ್.ಸಿ. 25, ಬಸವನಹಳ್ಳಿ ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ದುರ್ನಡತೆ, ಬೇಜವಾಬ್ದಾರಿತನ ಘೋರ ನಿರ್ಲಕ್ಷತನ, ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

"1. ದಿನಾಂಕ : 20–06–2010ರಂದು ಬಸವನಹಳ್ಳಿ ಪೊಲೀಸ್ ಠಾಣೆಯ ರಾತ್ರಿ ಎಸ್.ಎಚ್.ಓ. ಕರ್ತವ್ಯದಲ್ಲಿದ್ದ ನೀವು ಆ ದಿನ ರಾತ್ರಿ 23:30 ಗಂಟೆಗೆ ಶ್ರೀ ರಾಮಕೃಷ್ಣನ್ ನಂಬಿಯಾರ್‌ರವರು ತಮ್ಮ ಮೇಲೆ ಕೆಲವು ವ್ಯಕ್ತಿಗಳು ಹಲ್ಲೆ ನಡೆಸಿ ಕೊರಳಲಿದ್ದ ಚಿನ್ನದ ಸರ ಕದ್ದುಕೊಂಡು ಹೋಗಿರುವ ಬಗ್ಗೆ ನೀಡಿದ ದೂರಿನ ಬಗ್ಗೆ ಪ್ರಕರಣ ದಾಖಲಿಸದೇ ನಿಮ್ಮ ಆದ್ಯ ಕರ್ತವ್ಯದಲ್ಲಿ ನಿರ್ಲಕ್ಷ್ಯತನ ತೋರಿರುತ್ತೀರಿ

2. ತನ್ನ ಮೇಲೆ ಹಲ್ಲೆಯಾಗಿರುವ ಬಗ್ಗೆ ಹಾಗೂ ಚಿನ್ನದ ಸರ ಕದ್ದುಕೊಂಡು ಹೋಗಿರುವ ಬಗ್ಗೆ ದೂರು ನೀಡಲು ಬಂದಿದ್ದ ಶ್ರೀ ರಾಮಕೃಷ್ಣನ್ ನಂಬಿಯಾರ್ ಹಾಗೂ ಅವರ ಜೊತೆಯಲ್ಲಿದ್ದ ಮೂವರು ಸಂಗಡಿಗರನ್ನು ವಿನಾಕಾರಣ ಬೆಳಗಿನ ಜಾವ ಐದು ಗಂಟೆಯವರೆಗೂ ಪೊಲೀಸ್ ಠಾಣೆಯಲ್ಲಿ ಅಕ್ರಮ ಬಂಧನದಲ್ಲಿಟ್ಟು ದುರ್ನಡತೆ ಪ್ರದರ್ಶಿಸಿರುತ್ತೀರಿ.

3. ಶ್ರೀ ರಾಮಕೃಷ್ಣನ್ ನಂಬಿಯಾರ್‌ರವರು ತಮ್ಮ ಮೇಲೆ ಹಲ್ಲೆಯಾದ ಬಗ್ಗೆ ಹಾಗೂ ಈ ಸಮಯದಲ್ಲಿ ಕೊರಳಲಿದ್ದ ಚಿನ್ನದ ಸರವನ್ನು ಕದ್ದುಕೊಂಡು ಹೋಗಿರುವ ಬಗ್ಗೆ ಲಿಖಿತ ದೂರು ಸಲ್ಲಿಸಲು ಠಾಣೆಗೆ ಬಂದಿದ್ದು, ಸದರಿಯವರ ದೂರನ್ನು ಹರಿದು ಹಾಕಿ ಅವರನ್ನು ಹೆದರಿಸಿ ಚಿನ್ನದ ಸರ ಕಳ್ಳತನವಾಗಿರುವ ವಿಷಯವನ್ನು ದೂರಿನಲ್ಲಿ ಸೇರಿಸದೇ ಬೇರೆ ದೂರನ್ನು ಬರೆಯಿಸಿಕೊಂಡು ಠಾಣಾ ಎಸ್.ಎಚ್.ಓ. ಹುದ್ದೆಯ ದುರುಪಯೋಗ ಮಾಡಿಕೊಂಡು ನಿಮ್ಮ ಆದ್ಯ ಕರ್ತವ್ಯದಲ್ಲಿ ದುರ್ನಡತೆ, ಬೇಜವಾಬ್ದಾರಿತನ ತೋರಿಸಿರುತ್ತೀರಿ.

4. ಶ್ರೀ ರಾಮಕೃಷ್ಣನ್ ನಂಬಿಯಾರ್ ಹಾಗೂ ಸಂಗಡಿಗರನ್ನು ಪೊಲೀಸ್ ಠಾಣೆಯಿಂದ ಬಿಡಲು ರೂ. 8,000/–ಗಳ ಲಂಚವನ್ನು ಪಡೆದು ನಿಮ್ಮ ಆಧ್ಯ ಕರ್ತವ್ಯದಲ್ಲಿ ದುರ್ನಡತೆ ತೋರಿಸಿರುತ್ತೀರಿ.

5. ಶ್ರೀ ರಾಮಕೃಷ್ಣನ್ ನಂಬಿಯಾರ್‌ರವರು ಸಲ್ಲಿಸಿದ ದೂರಿನ ಮೇಲೆ ಘೋರ ಪ್ರಕರಣ ದಾಖಲಿಸಬೇಕಾಗಿದ್ದ ನೀವು ಯಾವುದೋ ಆಮಿಷಕ್ಕೆ ಒಳಗಾಗಿ ಕೇವಲ ಎನ್.ಸಿ. ದಾಖಲಿಸಿರುತ್ತೀರಿ. ಇದರಿಂದ ಮೂರನೇ ದಿನ ಅಂದರೆ ದಿನಾಂಕ: 21–06–2010ರಂದು ಬಸವನಹಳ್ಳಿ ಪೊಲೀಸ್ ಠಾಣೆಯಲ್ಲಿ ಮೊ.ನಂ. 100/2010 ಕಲಂ 394 ಐ.ಪಿ.ಸಿ. ರೀತ್ಯಾ ಪ್ರಕರಣ ದಾಖಲಾಗಿದ್ದು ರಾತ್ರಿ ಎಸ್.ಎಚ್.ಓ. ಕರ್ತವ್ಯದಲ್ಲಿ ನೀವು ತೋರಿಸಿರುವ ಘೋರ ನಿರ್ಲಕ್ಷ್ಯತನವನ್ನು ತೋರಿಸುತ್ತದೆ.

6. ಶ್ರೀ ಖಲೀಲ್ ಅಹಮದ್‌ರವರು ಎಂ.ಜಿ. ಆಸ್ಪತ್ರೆಯಲ್ಲಿ ನೀಡಿದ ದೂರಿನ ಮೇಲೆ ಎಸ್.ಸಿ. 96/2010 ನೀಡಿರುವ ಬಗ್ಗೆ ಠಾಣಾ ದಿನಚರಿಯಲ್ಲಿ ನಮೂದು ಮಾಡಿರುತ್ತೀರಿ. ಆದರೆ ಎನ್.ಸಿ. ನಂ. 96/2010ರ ಅಸಲು ನಮೂನೆ 76–ಎ ಕ್ರ.ಸಂ. 798ರಲ್ಲಿ ಯಾವುದೇ ವಿಷಯವನ್ನು ನಮೂದು ಮಾಡಿರುವುದಿಲ್ಲ. ಅಲ್ಲದೇ ಖಲೀಲ್ ಅಹಮದ್‌ರವರು ನೀಡಿರುವ ದೂರನ್ನು ಸಿ.ಮಿಸ್. 189/2010ರಲ್ಲಿ ಮೂಲ ಪ್ರತಿಯಲ್ಲಿ ಬರೆದಿರುವ ಬಗ್ಗೆ ಕಂಡು ಬಂದಿದ್ದು, ದ್ವಿಪ್ರತಿಯಲ್ಲಿ ಸಿ.ಮಿಸ್. 96/2010 ಎಂದು ತಿದ್ದುಪಡಿ ಮಾಡಿರುತ್ತೀರಿ. ಈ ರೀತಿ ಜವಾಬ್ದಾರಿಯುತ ರಾತ್ರಿ ಎಸ್.ಎಚ್.ಓ ಕರ್ತವ್ಯದಲ್ಲಿದ್ದ ನೀವು ಠಾಣಾ ದಾಖಲಾತಿಗಳನ್ನು ನಿಮ್ಮ ಕೆಟ್ಟ ಉದ್ದೇಶಗಳಿಗಾಗಿ ಉಪಯೋಗಿಸಿಕೊಂಡು ನಿಮ್ಮ ಆಧ್ಯ ಕರ್ತವ್ಯದಲ್ಲಿ ಘೋರ ನಿರ್ಲಕ್ಷ್ಯತನ ದುರ್ನನತೆ ಹಾಗೂ ಬೇಜವಾಬ್ದಾರಿತನವನ್ನು ತೋರಿಸಿರುತ್ತೀರಿ."

ಮೇಲಿನ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಸಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ : (1)ರಲ್ಲಿ ಓದಲಾದ ದಿನಾಂಕ: 10–10–2011ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು ಇವರು ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಎರಡು ವರ್ಷಕಾಲ ಮುಂದೂಡಿ, ದಿನಾಂಕ: 23–06–2010 ರಿಂದ 17–10–2010 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ, ಈ ಅವಧಿಯಲ್ಲಿ ಪಡೆದ ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 09–10–2012ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸಿ ಇವರ ವಾರ್ಷಿಕ ವೇತನ ಬಡ್ತಿಯನ್ನು ತದನಂತರ ಗಳಿಸುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 2 ವರ್ಷಗಳ ಕಾಲ ಮುಂದೂಡಲಾಗಿದೆ. ಮತ್ತು ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ, ಈ ಅವಧಿಯಲ್ಲಿ ಪಡೆದ ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಿದೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ಇಲಾಖಾ ವಿಚಾರಣೆ ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಸದರಿ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಕರ್ತವ್ಯದಲ್ಲಿ ದುರ್ನಡತೆ, ಬೇಜವಾಬ್ದಾರಿತನ ಹಾಗೂ ಘೋರ ನಿರ್ಲಕ್ಷ್ಯತನ, ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಮೇಲ್ಮನವಿ ಪ್ರಾಧಿಕಾರವು ಮಾರ್ಪಡಿಸಿದ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವಾದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 35 ಪೊಸಿಅ 2012, ಬೆಂಗಳೂರು, ದಿನಾಂಕ: 11ನೇ ಫೆಬ್ರವರಿ, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ.ಜಿ. ಕೃಷ್ಣಮೂರ್ತಿ, ಹೆಚ್.ಸಿ. 25, ಬಸವನಹಳ್ಳಿ ಪೊಲೀಸ್ ಠಾಣೆ, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

**P.R. 294**

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್. ಇ. ಗಂಗಾಧರ ಸ್ವಾಮಿ, ಪಿ.ಐ., ವಿರಾಜಪೇಟೆ ವೃತ್ತ, ಕೊಡಗು ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಬಗ್ಗೆ ಅಂತಿಮ ಆದೇಶ

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಅದೇಶ ಸಂಖ್ಯೆ: ಇವಿ/25/2011–12 ಓಬಿ ಸಂಖ್ಯೆ: 39/2011–12, ದಿನಾಂಕ: 21–12–11
2. ಮೇಲ್ಮನವಿ ಪ್ರಾಧಿಕಾರ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)/88/2011–12 (ಓ.ಬಿ. ಸಂಖ್ಯೆ: 30/2012), ದಿನಾಂಕ: 28–03–2012
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 29–04–2012
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)/88/2011–12, ದಿನಾಂಕ: 18–08–2011
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 175 ಸಿಎನ್‌ಎಸ್ 2012, ದಿನಾಂಕ: 13–02–2013

**ಪ್ರಸ್ತಾವನೆ:**

ಶ್ರೀ ಎಸ್.ಇ. ಗಂಗಾಧರ ಸ್ವಾಮಿ, ಪಿ.ಐ., ವಿರಾಜಪೇಟೆ ವೃತ್ತ, ಇವರು ಈ ಹಿಂದೆ ಪಿರಿಯಾಪಟ್ಟಣ ವೃತ್ತದಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ :**

> "ಶ್ರೀ ಎಸ್.ಇ. ಗಂಗಾಧರ ಸ್ವಾಮಿ, ಸಿ.ಪಿ.ಐ., ವಿರಾಜಪೇಟೆ ವೃತ್ತರವರು (ಈ ಹಿಂದೆ ಪಿರಿಯಾಪಟ್ಟಣ ವೃತ್ತ) ಇವರು ಪಿರಿಯಾಪಟ್ಟಣ ಠಾಣಾ ಮೊ.ಸಂ. 146/10 ಪ್ರಕರಣದ ಆರೋಪಿಗಳನ್ನು ದಸ್ತಗಿರಿ ಮಾಡದೇ ಕರ್ತವ್ಯದಲ್ಲಿ ನಿರ್ಲಕ್ಷ್ಯತೆ ಹಾಗೂ ಬೇಜವಾಬ್ದಾರಿತನ ತೋರಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ: 21–12–2011ರ ಆದೇಶದಲ್ಲಿ ಅರ್ಜಿದಾರರ ವಾರ್ಷಿಕ ವೇತನ ಬಡ್ತಿಯನ್ನು 6 ತಿಂಗಳ ಕಾಲ ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ : (2)ರಲ್ಲಿ ಓದಲಾದ ದಿನಾಂಕ: 28–03–2012ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರಿಗೆ ವಿಧಿಸಿದ ದಂಡನೆಯು ಆರೋಪಕ್ಕೆ ಅನುಗುಣವಾಗಿಲ್ಲವೆಂದು ಪರಿಗಣಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶಃ ಮಾರ್ಪಡಿಸುವ ಕುರಿತಂತೆ ಓದಲಾದ (5)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 49 ಪೊಸಿಅ 2012, ಬೆಂಗಳೂರು, ದಿನಾಂಕ: 02ನೇ ಮಾರ್ಚ್, 2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಇ. ಗಂಗಾಧರಸ್ವಾಮಿ, ಪಿ.ಐ., ವಿರಾಜಪೇಟೆ ವೃತ್ತ, ಕೊಡಗು ಜಿಲ್ಲೆ, ಇವರ ಪರಿಷ್ಕರಣ ಮೇಲ್ಮನವಿಯ ಅರ್ಜಿಯನ್ನು ಪುರಸ್ಕರಿಸಿ, ಶಿಸ್ತು ಪ್ರಾಧಿಕಾರವು ದಿನಾಂಕ: 21–12–2011ರ ಆದೇಶದಲ್ಲಿ ವಿಧಿಸಿದ ದಂಡನೆಯನ್ನು ಮಾರ್ಪಡಿಸಿ, ಕರ್ನಾಟಕ ಪೊಲೀಸ್ ಕಾಯ್ದೆ 1963ರ ಕಲಂ 23 ರನ್ವಯ ವಾಗ್ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ರವಿಪ್ರಕಾಶ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ. (ಪೊಲೀಸ್ ಸೇವೆಗಳು)

P.R. 435

## ಇಂಧನ ಸಚಿವಾಲಯ

**ವಿಷಯ :** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004, ದಿನಾಂಕ: 15–03–2005
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008, ದಿನಾಂಕ: 04–09–2008
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಪಿಎಸ್‌ಆರ್ 2012, ದಿನಾಂಕ: 23–04–2012, 09–05–2012, 05–06–2012, 25–06–2012, 03–07–2012, 23–07–2012, 06–08–2012, 31–08–2012, 06–09–2012, 04–10–2012, 08–10–2012, 02–11–2012, 15–11–2012, 14–12–2012, 11–01–2013 ಮತ್ತು 23–02–2013

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ: 01–08–2008ರಿಂದ ಜಾರಿಗೆ ಬರುವಂತೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದರಿಂದ ವಿದ್ಯುತ್ ಕಂಪನಿಗಳಿಗೆ ಆಗುವ ಆದಾಯದಲ್ಲಿನ ಕೊರತೆಯನ್ನು ಸರ್ಕಾರರಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿದೆ.

3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನವಾಗಿ 2012–13ರ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ. 4550.00 ಕೋಟಿಗಳನ್ನು ಮತ್ತು ಪೂರಕ ಅಂದಾಜು–2ರಲ್ಲಿ ರೂ. 1250 ಕೋಟಿಗಳನ್ನು ಒದಗಿಸಲಾಗಿದೆ.

4. ವಿಸಕಂಗಳು ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ 2012–13ನೇ ಸಾಲಿಗೆ ರೂ. 4722.04 ಕೋಟಿ ಸಹಾಯಧನ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ. ರೂ. 54.76 ಕೋಟಿಗಳಷ್ಟು ಸಹಾಯಧನವನ್ನು ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘಕ್ಕೆ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ.

5. ಸರ್ಕಾರವು 2012–13ನೇ ಸಾಲಿನ ಮಾರ್ಚ್–2013ಕ್ಕೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಪಿಎಸ್‌ಆರ್ 2012, ಬೆಂಗಳೂರು, ದಿನಾಂಕ: 01ನೇ ಮಾರ್ಚ್, 2013**

1. ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ಮಾರ್ಚ್–2013ರ ತಿಂಗಳಿನಲ್ಲಿ ರೂ. 200/– ಕೋಟಿಗಳ (ರೂ. ಇನ್ನೂರು ಕೋಟಿ ರೂಪಾಯಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ, ಈ ಕೆಳಕಂಡಂತೆ ಬಿಡುಗಡೆಗೊಳಿಸಿದೆ.

(ರೂ. ಕೋಟಿಗಳಲ್ಲಿ)

| ವಿಸಕಂ | 10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ವಿಸಕಂಗಳ ಪರವಾಗಿ ಕವಿನಿನಿಗೆ ನೇರ ಬಿಡುಗಡೆ | ವಿಸಕಂಗಳಿಗೆ ನೇರ ಬಿಡುಗಡೆ |
|---|---|---|---|
| 1 | 2 | 3 | 4 |
| ಮವಿಕಂ | 5.00 | 5.00 | 0.00 |
| ಹುವಿಕಂ | 138.75 | 90.00 | 48.75 |
| ಗುವಿಕಂ | 50.00 | 30.00 | 20.00 |
| ಚಾವಿಸನಿನಿ | 6.25 | 0.00 | 6.25 |
| **ಒಟ್ಟು** | **200.00** | **125.00** | **75.00** |

2. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗೆ ನೇರ ಬಿಡುಗಡೆ ಮೊತ್ತವಾದ ರೂ. 48.75 ಕೋಟಿಗಳಲ್ಲಿ ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘದ ಬಾಬ್ತು ಸಹಾಯಧನ ರೂ. 8.75 ಕೋಟಿಗಳೆಂದು ಲೆಕ್ಕೀಕರಿಸುವುದು.

3. ಸದರಿ ಮೊತ್ತವನ್ನು ಲೆಕ್ಕಶೀರ್ಷಿಕೆ "2801–80–101–1–04–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿಯಲ್ಲಿ ಭರಿಸತಕ್ಕದ್ದು.

4. ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಸಹಾಯಧನವನ್ನು ಸರ್ಕಾರವು ಪರಿಶೀಲಿಸಿ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ಮೇಲಿನ ಕೋಷ್ಟಕದಲ್ಲಿರುವಂತೆ ಬಿಡುಗಡೆ ಮಾಡಿದೆ.

5. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ. 125.00/– ಕೋಟಿಗಳ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

6. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ, ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

7. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

8. 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟು ಸ್ಥಾವರಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸರಬರಾಜು ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

9. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆ.ಇ. 11 ವೆಚ್ಚ–1/2013, ದಿನಾಂಕ: 28–02–2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎ. ಚಪ್ಪರಬಂದ್,**

ಸರ್ಕಾದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

P.R. 440

## COMMERCE AND INDUSTRIES SECRETARIAT

**Sub :** Project proposal of M/s Manyata Developers Pvt. Ltd., to establish a "IT/BT/BPO Park with Hotel, Serviced Apartments, Residential condominium and other common facilities" at Kotnatevaru, Kondanahalli and Gollahalli Villages, Devanahalli Taluk Bangalore Rural District - Reg.

**Read :** (1) Government Order No. CI 190 SPI 2010, dated 02.06.2010.

(2) Request from M/s Manyata Developers Pvt. Ltd., dated: 15.03.2012.

**PREAMBLE:**

The project proposal of M/s Manyata Developers Pvt. Ltd., establish a "IT /BT /BPO Park with Hotel, Serviced Apartments, Residential condominium and other common facilities" at Kotnatevaru, Kondanahalli and Gollahalli Villages, Devanahalli Taluk Bangalore Rural District has been approved and recommended to KIADB to acquire and allot as SUC in 22nd SHLCC meeting held on 24.05.2010. The Government Order No. CI 190 SPI 2010, dated 02.06.2010 was issued to give effect to the above decision. The Government Order has the condition of obtaining the "change of land use from Urban Development Department". KIADB has informed the company to obtain change of land use before and issue of preliminary notification.

The company had applied to KIADB along with the details, paid initial deposits of Rs. 10.83 crores (approx. 40% of tentative cost) & requested to acquire & allot the land. In the above Government order mentioned that 247 acres - KIADB to acquire and allot as SUC in Kotnatevaru, Kondanahalli and Gollahalli Villages, Devenahalli Taluk, Bangalore Rural District subject to obtaining change of land use from Urban Development Department and KIADB vide their letter dated: 18.02.2012 informed company to obtain change of land use from Urban Development before issue of the preliminary notification.

The company in its letter dated: 19.03.2012 informed since they have already paid money of 40% towards the provisional land value and KIADB to take action to acquire land and issue preliminary notification. The request of the company was discussed in the screening committee meeting dated: 17.05.2012. Later in the meeting convened on 16.10.2012 at Karnataka Udyoga Mitra. The proposal of M/s Manyata Developers Pvt. Ltd., were discussed.

The Government has examined the proposal and hence the-following order.

### GOVERNMENT ORDER NO. CI 158 SPI 2012, BANGALORE DATED: 15.03.2013

In continuation of the Government Order read at (1) above, Government is pleased to approve the following with regard to the land acquisition for the proposal of M/s Manyata Developers Pvt. Ltd.,

**"Land: a) KIADB to issue preliminary notification to acquire 247 acres of land at Kotnatevaru Kondanahalli and Gollahalli Villages, Devenahalli Taluk,Bangalore Rural District under Section 1(3), 3(1) and 28(1) of KIADB Act for the said project and initiate acquisition process.**

**b) Further, after completion of the acquisition process and after the said land is acquired/transferred by Government to KIADB, KIADB to allot the land to the project proponent and hand over the possession" .**

Other terms and condition remain unaltered.

By Order and in the name of the Governor of Karnataka,
**SHIVASHANKAR NAIK .L**
Desk Officer (Technical Cell),
Commerce & Industries Department.

**P.R. 445**

## ಇಂಧನ ಸಚಿವಾಲಯ

**ವಿಷಯ :** ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನ ಬಿಡುಗಡೆ ಬಗ್ಗೆ

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004, ದಿನಾಂಕ: 15-03-2005
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008, ದಿನಾಂಕ: 04-09-2008
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಪಿಎಸ್‌ಆರ್ 2012, ದಿನಾಂಕ: 23-04-2012, 09-05-2012, 05-06-2012, 25-06-2012, 03-07-2012, 23-07-2012, 06-08-2012, 31-08-2012, 06-09-2012, 04-10-2012, 08-10-2012, 02-11-2012, 15-11-2012, 14-12-2012, 11-01-2013, 23-01-2013, 23-02-2013 01-03-2012 ಮತ್ತು 07-03-2013

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ-1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.

2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ: 01–08–2008ರಿಂದ ಜಾರಿಗೆ ಬರುವಂತೆ ರೈತರ 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದರಿಂದ ವಿದ್ಯುತ್ ಕಂಪನಿಗಳಿಗೆ ಆಗುವ ಆದಾಯದಲ್ಲಿನ ಕೊರತೆಯನ್ನು ಸರ್ಕಾರರಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿದೆ.

3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನವಾಗಿ 2012–13ರ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "2801–80–101–1–04–106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ. 4550.00 ಕೋಟಿಗಳನ್ನು, ಪೂರಕ ಅಂದಾಜು–2ರಲ್ಲಿ ರೂ. 1250 ಕೋಟಿಗಳನ್ನು ಮತ್ತು ಪೂರಕ ಅಂದಾಜು 3ರಲ್ಲಿ ರೂ. 750.00 ಕೋಟಿಗಳನ್ನು ಒದಗಿಸಲಾಗಿದೆ.

4. ವಿಸಕಂಗಳು ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸರ್ಕಾರ 2012–13ನೇ ಸಾಲಿಗೆ ರೂ. 4722.04 ಕೋಟಿ ಸಹಾಯಧನ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ. ರೂ. 54.76 ಕೋಟಿಗಳಷ್ಟು ಸಹಾಯಧನವನ್ನು ಹುಕ್ಕೇರಿ ಗ್ರಾಮೀಣ ವಿದ್ಯುತ್ ಸಹಕಾರ ಸಂಘಕ್ಕೆ ಒದಗಿಸಲು ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ಆದೇಶಿಸಿದೆ.

5. ಸರ್ಕಾರವು 2012–13ನೇ ಸಾಲಿಗೆ ವಿದ್ಯುತ್ ಸರಬರಾಜು ಕಂಪನಿಗಳಿಗೆ ಸಹಾಯಧನದ ಬಾಕಿ ಬಾಬ್ತಿಗೆ ರೂ. 300.00 ಕೋಟಿಗಳನ್ನು ಬಿಡುಗಡೆ ಮಾಡಲು ಪ್ರಸ್ತುತ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 14 ಪಿಎಸ್‌ಆರ್ 2012, ಬೆಂಗಳೂರು, ದಿನಾಂಕ: 23ನೇ ಮಾರ್ಚ್, 2013**

1. ಸರ್ಕಾರವು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗ ನಿಗದಿಪಡಿಸಿರುವ ಬಾಕಿ ಸಹಾಯಧನದ ಬಾಬ್ತು ರೂ. 300.00 ಕೋಟಿಗಳ (ರೂ. ಮುನ್ನೂರು ಕೋಟಿಗಳು ಮಾತ್ರ) ಸಹಾಯಧನವನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ಮತ್ತು ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಬಿಡುಗಡೆಗೊಳಿಸಿದೆ.

(ರೂ. ಕೋಟಿಗಳಲ್ಲಿ)

| ವಿಸಕಂ | 10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಹುವಿಕಂನ ಪರವಾಗಿ ಕವಿನಿನಿಗೆ ನೇರ ಬಿಡುಗಡೆ | ಹುವಿಕಂನ ಪರವಾಗಿ ಬೆವಿಕಂಗೆ ನೇರ ಬಿಡುಗಡೆ | ಹುವಿಕಂನ ಪರವಾಗಿ ಚಾವಿಸನಿನಿಗೆ ನೇರ ಬಿಡುಗಡೆ | ವಿಸಕಂಗಳಿಗೆ ನೇರ ಬಿಡುಗಡೆ |
|---|---|---|---|---|---|
| 1 | 2 | 3 | 4 | 5 | 6 |
| ಹುವಿಕಂ | 283.64 | 150.00 | 23.00 | 11.00 | 99.64 |
| ಗುವಿಕಂ | 16.36 | | | | 16.36 |
| **ಒಟ್ಟು** | **300.00** | **150.00** | **23.00** | **11.00** | **116.00** |

2. ಸದರಿ ಮೊತ್ತವನ್ನು ಲೆಕ್ಕಶೀರ್ಷಿಕೆ "2801–80–101–1–04–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿಯಲ್ಲಿ ಭರಿಸತಕ್ಕದ್ದು.

3. ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡಿರುವ ಸಹಾಯಧನವನ್ನು ಸರ್ಕಾರವು ಪರಿಶೀಲಿಸಿ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ಮೇಲಿನ ಕೋಷ್ಟಕದಲ್ಲಿರುವಂತೆ ಬಿಡುಗಡೆ ಮಾಡಿದೆ.

4. ವಿದ್ಯುತ್ ಸರಬರಾಜು ಕಂಪನಿಗಳ ಪರವಾಗಿ ಕರ್ನಾಟಕ ವಿದ್ಯುತ್ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ರೂ. 150.00/– ಕೋಟಿಗಳ ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳ ವಿದ್ಯುತ್ ಖರೀದಿ–ಅಸಲು ಬಾಕಿಗೆ ಲೆಕ್ಕೀಕರಿಸುವುದು.

5. ಮೇಲಿನ ಕೋಷ್ಟಕದಲ್ಲಿರುವಂತೆ ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯ ಪರವಾಗಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಮರುಹಂಚಿಕೆ ಮಾಡಿರುವ ಸಹಾಯಧನವನ್ನು ಗುಜರಾತ್ ಊರ್ಜಾ ವಿಕಾಸ ನಿಗಮ ನಿಯಮಿತ (GUVNL) ದಿಂದ ಖರೀದಿಸುತ್ತಿರುವ ಅಲ್ಪಾವಧಿ ವಿದ್ಯುತ್ ಖರೀದಿ ವೆಚ್ಚ ಭರಿಸಲು ರೂ. 23.00 ಕೋಟಿಗಳನ್ನು (ಇಪ್ಪತ್ತಮೂರು ಕೋಟಿ ರೂ.ಗಳು ಮಾತ್ರ) ಬಿಡುಗಡೆ ಮಾಡಿದೆ.

6. ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯ ಪರವಾಗಿ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿರುವ ಸಹಾಯಧನವನ್ನು JSWದಿಂದ ಖರೀದಿಸಿರುವ ವಿದ್ಯುತ್ ಖರೀದಿ ವೆಚ್ಚ ಭರಿಸಲು ರೂ. 11.00 ಕೋಟಿಗಳನ್ನು (ಹನ್ನೊಂದು ಕೋಟಿ ರೂ.ಗಳು ಮಾತ್ರ) ಬಿಡುಗಡೆ ಮಾಡಿದೆ.

7. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಹುಬ್ಬಳ್ಳಿ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ, ವಿದ್ಯುತ್ ಸರಬರಾಜು ಕಂಪನಿ, ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮಗಳು ಹಣ ಸ್ವೀಕೃತ ರಸೀದಿಯ ಮೇಲೆ ಸರ್ಕಾರದ ಉಪ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜು ಪಡೆದು ಹಣ ಪಡೆಯತಕ್ಕದ್ದು. ಈ ಆದೇಶದ ಪ್ರಕಾರ ಹಣ ಸ್ವೀಕೃತಿ ಮಾಡುವ ಸಂಸ್ಥೆಗಳು ಮೂರು ದಿನಗಳೊಳಗೆ ಅನುಸರಣ ವರದಿ ಮತ್ತು ಬಳಕೆಯ ಪ್ರಮಾಣ ಪತ್ರ (Utilization Certificate) ಸಲ್ಲಿಸತಕ್ಕದ್ದು.

8. ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು, ತಮ್ಮ ವಿದ್ಯುತ್ ಖರೀದಿ ಬಾಕಿಗಳನ್ನು ಪಾವತಿಸಲು ನಿಯತಕ್ರಿಯಾ ಯೋಜನೆಯೊಂದನ್ನು ಹೊಂದಿರತಕ್ಕದ್ದು ಹಾಗೂ ವಿದ್ಯುತ್ ಖರೀದಿ ಬಾಕಿಯನ್ನು ವಿದ್ಯುತ್ ಸರಬರಾಜು ಕಂಪನಿಗಳ ಸ್ವಂತ ಸಂಪನ್ಮೂಲಗಳಿಂದ ಪಾವತಿಸತಕ್ಕದ್ದು.

9. 10 ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ಟು ಸ್ಥಾವರಗಳಿಗೆ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸರಬರಾಜು ಸ್ಥಾವರಗಳಿಗೆ ಸಂಬಂಧಿಸಿದ ಎಲ್ಲಾ ಬೇಡಿಕೆಗಳ ಬಗ್ಗೆ ಮಹಾಲೇಖಪಾಲರಿಂದ ಪರಿಶೀಲಿಸಿ/ಲೆಕ್ಕ ಪರಿಶೋಧನೆಗೆ ಒಳಪಡಿಸತಕ್ಕದ್ದು ಹಾಗೂ ಲೆಕ್ಕ ಪರಿಶೋಧನಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

10. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆ.ಇ. 368 ವೆಚ್ಚ-1/2013, ದಿನಾಂಕ: 22-03-2013ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ.ಎ. ಚಪ್ಪರಬಂದ್,**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**P.R. 448**

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ಎಂ. ಬಿ. ಭಜಂತ್ರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ರಾಮದುರ್ಗ, ಇವರ ಮೇಲಿನ ಆರೋಪಗಳ ಕುರಿತು ಅಂತಿಮ ಆದೇಶ

**ಓದಲಾಗಿದೆ :**
1. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರ ಪತ್ರ ಸಂಖ್ಯೆ: ಸಿ5/ದೂರು/ ಬಿಇಓರಾ/ 2005-06, ದಿನಾಂಕ: 04-06-2008
2. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ: ಇಡಿ 265 ಡಿಜಿಡಿ 2005, ದಿನಾಂಕ: 12/08/2008
3. ಶ್ರೀ ಎಂ. ಬಿ. ಭಜಂತ್ರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ರಾಮದುರ್ಗ, ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ: 06-10-2008
4. ಸರ್ಕಾರದ ಆದೇಶ ಸಂಖ್ಯೆ: ಇಡಿ 265 ಡಿಜಿಡಿ 2005, ದಿನಾಂಕ: 09-02-2010
5. ಶ್ರೀ ಡಿ.ವಿ. ಶೇಟ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಧಾರವಾಡ ಇವರ ವಿಚಾರಣಾ ವರದಿ ದಿನಾಂಕ: 28-08-2010
6. ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರ ಪತ್ರ ಸಂಖ್ಯೆ: ಸಿ5/ದೂರು/ಬಿಇಓರಾ/37/ 2005-06, ದಿನಾಂಕ: 21-12-2010
7. ಎರಡನೇ ಕಾರಣ ಕೇಳುವ ನೋಟೀಸು ಸಂಖ್ಯೆ: ಇಡಿ 58 ಡಿಜಿಓ 2010, ದಿನಾಂಕ: 12-09-2012
8. ಶ್ರೀ ಎಂ. ಬಿ. ಭಜಂತ್ರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ರಾಮದುರ್ಗ, ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ: 25-10-2012

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರಲ್ಲಿ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರು ಶ್ರೀ ಎಂ. ಬಿ. ಭಜಂತ್ರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ರಾಮದುರ್ಗ ಇವರ ಮೇಲೆ ಈ ಕೆಳಕಂಡ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಶಿಸ್ತು ಕ್ರಮ ಜರುಗಿಸುವ ಸಂಬಂಧ ಅನುಬಂಧ 1 ರಿಂದ ರವರೆಗಿನ ಕರಡು ದೋಷರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತಾರೆ.

**ಆರೋಪ : 1**-ಶ್ರೀ ಕೆ.ಪಿ. ರಾಠೋಡ, ಕ.ಗಂ. ಶಾಲೆ, ಲಕ್ಷ್ಮೀನಗರ ಇವರೊಂದಿಗೆ ಶ್ರೀ ಆರ್.ವಿ. ಬಟಕುರ್ಕಿ, ಕ.ಗಂ. ಶಾಲೆ, ಚಿಂಚಖಂಡಿ, ಹಾಗೂ ಶ್ರೀ ಪಟ್ಟಣಶೆಟ್ಟಿ, ಕ.ಗಂ. ಶಾಲೆ, ಚನ್ನಾಪೂರ ಇವರೊಂದಿಗೆ ಶ್ರೀ ಪಿ.ಎಲ್. ಲಮಾಣಿ, ಕ.ಗಂ. ಶಾಲೆ, ತಿಮ್ಮಾಪುರ ಎಸ್.ಎಲ್.ಟಿ. ಇವರಿಗೆ ಪರಸ್ಪರ ವರ್ಗಾವಣೆಯಾಗಿದ್ದು, ಎರಡು ಸ್ಥಳಗಳಲ್ಲಿ ಅಂತರ 5 ಕಿ.ಮೀ. ಇದ್ದು ಉಪ ನಿರ್ದೇಶಕರು ತಮ್ಮ ವರ್ಗಾವಣೆ ಆದೇಶ ದಿನಾಂಕ: 25-05-2005ರ ಕ್ರಮಸಂಖ್ಯೆ: 9ರಲ್ಲಿ ಎರಡೂ ಸ್ಥಳಗಳ ನಡುವಿನ ಅಂತರ 10 ಕಿ.ಮೀ. ಅಂತರ ಇದ್ದಲ್ಲಿ ಬಿಡುಗಡೆ ಮಾಡಲು ನಿರ್ದೇಶನವಿದ್ದರೂ ಸಹಿತ ವರ್ಗಾವಣೆ ನಿಯಮ ಉಲ್ಲಂಘಿಸಿ ಬಿಡುಗಡೆ ಮಾಡಿರುವ ಆರೋಪ.

**ಆರೋಪ : 2**-ಶ್ರೀಮತಿ ಐ.ಡಿ. ಇಂಡಿಕರ್, ಸ.ಶಿ.ಉ.ಗಂ. ಶಾಲೆ, ಪಿರನಗುಡಿ ಇವರ ಅನಧಿಕೃತ ಗೈರು ಹಾಜರಿ ದಿನಾಂಕ: 24-11-2004 ರಿಂದ 02-01-2005ರವರೆಗೆ ಪರಿಶೀಲಿಸಿದಾಗ ಡಿಸೆಂಬರ್ 2004ರ ತಿಂಗಳ ಪೂರ್ತಿ ವೇತನ ಬಟವಡೆ ಮಾಡಿದ್ದು, ನಂತರ ಒಂದು ವರ್ಷದ ನಂತರ ಡಿಸೆಂಬರ್ 2005ಕ್ಕೆ ಸರ್ಕಾರಕ್ಕೆ ಹಣ ತುಂಬಿದ್ದು, ಸರ್ಕಾರದ ಹಣ ದುರುಪಯೋಗದ ಬಗ್ಗೆ

**ಆರೋಪ : 3**-ಶ್ರೀ ಬಿ.ಎಂ. ಪತ್ತಾರ ಕ.ಗಂ. ಶಾಲೆ, ಎಂ. ಖಾನಾಪೂರ ಇಲ್ಲಿಗೆ ನಿಯೋಜಿಸಿದ್ದು, ಕ.ಗಂ. ಶಾಲೆ, ಬೋಚಬಾಳದಿಂದ ಶ್ರೀ ಆರ್.ವಿ. ಅಪ್ಪಾಜಿಗೌಡರ ಇವರನ್ನು ಹಲಗತ್ತಿಗೆ ನಿಯೋಜಿಸಿದ್ದು, ಕ್ರಾಸ್ ನಿಯೋಜನೆ ಮಾಡಿ ಇಲಾಖಾ ನಿಯಮ ಉಲ್ಲಂಘಿಸಿರುವ ಆಪಾದನೆ.

**ಆರೋಪ : 4**-ಶ್ರೀ ಎಲ್.ಬಿ. ಯರಗುದ್ರಿ, ಸ.ಶಿ., ಕ.ಗಂ. ಶಾಲೆ ಗೋಲಗುಂಪಿ ದಿನಾಂಕ: 01-06-2005ರಿಂದ 03-08-2005ರವರೆಗೆ ಗೈರು ಹಾಜರಿಯನ್ನು ವೇತನ ರಹಿತ ರಜೆ ಎಂದು ಪರಿಗಣಿಸಿ ಸೇವೆಗೆ ಪುನರ್ ಹಾಜರಪಡಿಸಿಕೊಂಡಿರುವಿರಿ. ಹಾಜರಪಡಿಸಿಕೊಳ್ಳುವ ಮುಂಚೆ ಇಲಾಖಾ ನಿಯಮಾವಳಿ ಅನುಸರಿಸದೇ ಇರುವ ಆರೋಪ.

ಮೇಲೆ ಓದಲಾದ ಕ್ರಮಾಂಕ (2)ರಲ್ಲಿ ಶ್ರೀ ಎಂ. ಬಿ. ಭಜಂತ್ರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ರಾಮದುರ್ಗ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ 1957 ನಿಯಮ 11 ರನ್ವಯ ಕಾರಣ ಕೇಳುವ ನೋಟಿಸನ್ನು ಜಾರಿಗೊಳಿಸಲಾಯಿತು.

ಮೇಲೆ ಓದಲಾದ ಕ್ರಮಾಂಕ (3)ರಲ್ಲಿ ಸದರಿ ಅಧಿಕಾರಿಯು ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವ ಸಂಬಂಧ ಸರ್ಕಾರದ ಮೇಲೆ ಓದಲಾದ ಕ್ರಮಾಂಕ (4)ರ ದಿನಾಂಕ: 09–02–2009ರ ಆದೇಶದಲ್ಲಿ ವಿಚಾರಣಾಧಿಕಾರಿಗಳು ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (5)ರಲ್ಲಿ ಶ್ರೀ ಡಿ.ವ್ಹಿ. ಶೇಟ್, ನಿವೃತ್ತ ನ್ಯಾಯಾಧೀಶರು, ಧಾರವಾಡ ಇವರು ಸದರಿ ಆರೋಪಗಳ ಬಗ್ಗೆ ವಿಚಾರಣೆ ನಡೆಸಿ ವಿಚಾರಣಾ ವರದಿಯಲ್ಲಿ ಶಿಸ್ತು ಪ್ರಾಧಿಕಾರದ ಆಪಾದಿತರ ಮೇಲೆ ಮಾಡಿದ ಯಾವ ಆಪಾದನೆಗಳು ರುಜುವಾರು ಪಡಿಸಿಲ್ಲವೆಂದು ವರದಿಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (6)ರ ದಿನಾಂಕ: 21–12–2010ರಲ್ಲಿ ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ ಇವರು ವಿಚಾರಣಾ ವರದಿಯ ಮೇಲೆ ಅಭಿಪ್ರಾಯ ಸಲ್ಲಿಸಿ ಕೆಲವೊಂದು ವರದಿಗಳನ್ನು ಒಪ್ಪಿ, ಕೆಲವೊಂದು ವರದಿಯನ್ನು ಒಪ್ಪಲು ಬರುವುದಿಲ್ಲವೆಂದು ಅಭಿಪ್ರಾಯಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (7)ರ 12–09–2012ರಂತೆ ಶ್ರೀ ಎಂ.ಬಿ. ಭಜಂತ್ರಿ, ಹಿಂದಿನ ಕ್ಷೇತ್ರ ಶಿಕ್ಷಣಾಧಿಕಾರಿ, ರಾಮದುರ್ಗ, ಆದ ನೀವು ಕರ್ತವ್ಯಲೋಪ, ಅಕ್ರಮ ಹಾಗೂ ದುರ್ವರ್ತನೆ ಎಸಗಿರುವ ಆರೋಪಗಳ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ–11ರನ್ವಯ ವಿಚಾರಣೆಯನ್ನು ನಡೆಸಿದ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಕಳುಹಿಸಿ ಆಪಾದಿತರಿಂದ ಲಿಖಿತ ರಕ್ಷಣಾ ಹೇಳಿಕೆ ಕೋರಲಾಯಿತು.

ಸದರಿ ಆರೋಪಗಳ ಬಗ್ಗೆ ಆಪಾದಿತರು ಮೇಲೆ ಓದಲಾದ ಕ್ರಮಾಂಕ (8)ರ ದಿನಾಂಕ: 25–10–2012ರಂತೆ ಲಿಖಿತ ಪ್ರತಿ ರಕ್ಷಣಾ ಹೇಳಿಕೆಯನ್ನು ಪೂರಕ ದಾಖಲೆಗಳೊಂದಿಗೆ ನೀಡಿ, ಅವರ ಮೇಲಿನ ಆರೋಪವನ್ನು ನಿರಾಕರಿಸಿ ವಿಚಾರಣಾ ವರದಿಯಂತೆ ತಮ್ಮ ಮೇಲಿನ ಅರೋಪಗಳನ್ನು ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ.

ಮೇಲಿನಂತೆ ಸಮಜಾಯಿಸಿಯನ್ನು ನೀಡಿ ತಮ್ಮ ಮೇಲಿನ ಆಪಾದನೆಗಳ ಸಂಬಂಧ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿರುವುದಿಲ್ಲ. ಆದ್ದರಿಂದ ತಮ್ಮ ಮೇಲಿನ ಆರೋಪಗಳಿಂದ ದೋಷಮುಕ್ತಗೊಳಿಸುವಂತೆ ಕೋರಿರುತ್ತಾರೆ.

ವಿಚಾರಣಾಧಿಕಾರಿಯವರು ನೀಡಿರುವ ವಿಚಾರಣಾ ವರದಿ ಹಾಗೂ ಸದರಿ ಅಧಿಕಾರಿಯು ನೀಡಿರುವ ವಿವರಣೆ/ರಕ್ಷಣಾ ಹೇಳಿಕೆ ಹಾಗೂ ಅವರು ಸಲ್ಲಿಸಿರುವ ಪೂರಕ ದಾಖಲೆಗಳನ್ನು ಸರ್ಕಾರವು ಪರಿಶೀಲಿಸಿ ಶ್ರೀಯುತರು ನೀಡಿದ ರಕ್ಷಣಾ ಹೇಳಿಕೆಯನ್ನು ಒಪ್ಪಿಕೊಂಡು ಈ ರೀತಿಯ ಘಟನೆಗಳು ಇನ್ನೂ ಮುಂದೆ ಮರುಕಳಿಸದಂತೆ ಎಚ್ಚರಿಕೆ ವಹಿಸುವಂತೆ ಸೂಚನೆ ನೀಡಲು ಸರ್ಕಾರವು ತೀರ್ಮಾನಿಸಿ ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 58 ಡಿಜಿಓ 2010, ಬೆಂಗಳೂರು, ದಿನಾಂಕ: 25ನೇ ಮಾರ್ಚ್, 2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಎಂ.ಬಿ. ಭಜಂತ್ರಿ, ಹಿಂದಿನ ಕ್ಷೇತ್ರ ಶಿಕ್ಷಣಾಧಿಕಾರಿಗಳು, ರಾಮದುರ್ಗ ಹಾಲಿ ಕ್ಷೇತ್ರ ಶಿಕ್ಷಣಾಧಿಕಾರಿ, ರಾಯಭಾಗ, ಚಿಕ್ಕೋಡಿ ಶೈಕ್ಷಣಿಕ ಜಿಲ್ಲೆ ಇವರ ವಿರುದ್ಧದ ಆರೋಪಗಳ ಮೇಲೆ ವಿಚಾರಣಾಧಿಕಾರಿಗಳ ವಿಚಾರಣಾ ವರದಿ ಒಪ್ಪಿ ಹಾಗೂ ಸದರಿ ಅಧಿಕಾರಿ ಇವರು ನೀಡಿರುವ ಹೇಳಿಕೆಯನ್ನು ಒಪ್ಪಿಕೊಂಡು ಅವರ ಮೇಲಿನ ಎಲ್ಲಾ ಆರೋಪಗಳಿಂದ ದೋಷಮುಕ್ತಗೊಳಿಸಿ ಇನ್ನೂ ಮುಂದೆ ಇಂತಹ ಘಟನೆಗಳು ಮರುಕಳಿಸದಂತೆ ಎಚ್ಚರಿಕೆ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶ್ರೀಪಾದು, ಹೆಚ್.ಎನ್.**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಆಡಳಿತ & ಸಮಿತಿಗಳು)

**P.R. 451**
**SC - 25**

## RURAL DEVELOPMENT AND PANCHAYAT RAJ SECRETARIAT

**SUB :** Implementation of the Centrally Sponsored Scheme-National Rural Livelihood Mission in the State of Karnataka through Karnataka State Rural Livelihood Promotion Society (KSRLPS)-Reg.

**READ :**
1. Letter No. M 13015/01/2010-SGSY-I dated 25-10-2010 from the Secretary to Government of India, MoRD, New Delhi, addressed to the Chief Secretary to Govt. of Karnataka.
2. Letter No. M 13015/01/2010-SGSY-I dated 21-6-2011 from the Secretary to GoI. MoRD, New Delhi, addressed to the Chief Secretary to Govt. of Karnataka.
3. Decision of the Cabinet in Subject No. C/435/2011, dated : 15-9-2011.

**Preamble :**

Government of Karnataka has been implementing many anti-poverty schemes in the rural areas. Swarnajayanthi Gram Swarozgar Yojana (SGSY) is one such scheme being implemented by the Department of Rural Development and Panchayat Raj, since April 1999.

Based on a systematic review of SGSY, the Ministry of Rural Development, Government of India has decided to restructure SGSY through the establishment of the National Rural Livelihood Mission (NRLM), vide letter dated 25-10-2010 read at (1) above.

Further, MoRD, Government of India has informed that each State is expected to transit to NRLM by constituting a State Rural Livelihood Mission (SRLM) to oversee the implementation of all NRLM related activities in the State and implement the scheme in a Mission mode vide letter dated : 21-6-2011 read at (2) above.

Therefore, Government felt an urgent need to set up the Karnataka State Rural Livelihood Promotion Society (KSRLPS) to undertake the activities expected of the State Rural Livelihood Mission (SRLM) and act as the implementing agency for NRLM in the

State and to establish State Mission Management Unit under KSRLPS. Government also felt it necessary to empower the Executive Committee of KSRLPS to enable to roll out the Mission in the State and take decisions regarding HR, Procurement and Admisnistrative matters including Finance. The funding of the Mission would be shared by the Central ad State Government in the ratio of 75:25.

Accordingly, detailed proposals for setting up of a SRLM were prepared and examined in consultation with Planning and Finance Departments. It was proposed that this scheme would be implemented in the select 20 blocks of the five Districts in the first phase. The selection of Blocks was based on the Report of Dr. Nanjundappa Committee and Social Mobilisation in the District. Further, the matter was placed before the Cabinet and the Cabinet has accorded approval to the proposal, vide its decision dated 15-9-2011 read at (3) above. Hence this Order :

**GOVERNMENT ORDER NO. RDP/25/SJY/2011 (A-1), BANGALORE, Dated :4-1-2013.**

In light of the circumstances explained in the preamble, Government are pleased to accord approval ;

i. To constitute the Karnataka State Rural Livelihood Promotion Society (KSRLPS) as the implementing agency for National Rural Livelihood Mission (NRLM) in the State of Karnataka under the Karnataka Societies Registration Act, 1960.

ii. To establish a State Mission Management Unit under KSRLPS.

iii. To empower the Executive Committee of KSRLPS to roll out the National Rural Livelihood Mission in the State and take decisions regarding HR, Procurement and Administrative matters including Finance.

iv. To converge various programmes of Line departments such as Departments of Women & Child Development, Health, Education, Social Welfare, Agriculture, Animal Husbandry, Horticulture, Labour, Employment and Training, Industries and Commerce and Co-operation etc. for achieving the objectives of NRLM in the State.

v. In the first phase, to implement the NRLM scheme in the following 20 Blocks convering five Districts as per the guidelines/instructions of MoRD, New Delhi.

| DISTRICT | TALUKA |
|---|---|
| 1. Belgaum | Athani, Gokak, Soudatti and Hukkeri |
| 2. Dharwad | Khalgatgi, Kundagol, and Navalgund |
| 3. Gulbarga | Gulbarga, Jewargi, Sedam and Aland |
| 4. Mysore | H.D. Kote, Hunsur, Nanjangud and T. Narasipura |
| 5. Tumkur | Gubbi, Kunigal, Madhugiri, Pavagada and Korategere |

This Order comes into force with effect from 15-9-2011.

This Order is issued with the concurrence of the Finance Department vide its U.O. Note No. FD 349 Exp 6/11 dated : 8-8-2011 and Planning Department vide its U.O. Note No. PD 66 DPD 2011, dated : 25-7-2011.

By Order and in the Name of the Governor of Karnataka,
**M. DEEPA**
Director (SEP) and Ex-officio
Deputy Secretary to Government,
Rural Development and Panchayat Raj Department.

**P.R. 256**

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆಯಲ್ಲಿ ವಿಮಾನ ಇಳಿದಾಣ ನಿರ್ಮಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಮೂಅಇ 37 ರಾಅವಿ 2003, ದಿನಾಂಕ : 14-8-2008.
2. ಸರ್ಕಾರಿ ಆದೇಶ ಸಂಖ್ಯೆ : ಮೂಅಇ 37 ರಾಅವಿ 2003, ದಿನಾಂಕ : 18-12-2008.
3. ಸರ್ಕಾರಿ ಆದೇಶ ಸಂಖ್ಯೆ : ಮೂಅಇ 37 ರಾಅವಿ 2003, ದಿನಾಂಕ : 31-1-2009.
4. ಸರ್ಕಾರಿ ಆದೇಶ ಸಂಖ್ಯೆ : ಮೂಅಇ 37 ರಾಅವಿ 2003, ದಿನಾಂಕ : 28-2-2009.
5. ಸರ್ಕಾರಿ ಆದೇಶ ಸಂಖ್ಯೆ : ಮೂಅಇ 125 ರಾಅವಿ 2008, ದಿನಾಂಕ : 19-3-2009.
6. ದಿನಾಂಕ : 19-3-2012 ರಂದು ಸರ್ಕಾರದ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ.
7. ಉಪ ವಿಭಾಗಾಧಿಕಾರಿಗಳು, ಬಾಗಲಕೋಟೆ ಇವರ ಪತ್ರ ಸಂಖ್ಯೆ : ಎಲ್ಎಕ್ಯೂ/ಎಸ್ಆರ್/9/08-09, ದಿನಾಂಕ : 10-4-2012.
8. ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರ ಪತ್ರ ಸಂಖ್ಯೆ : ಎಲ್ಎಕ್ಯೂ : ಸಿಆರ್-135/2008-09, ದಿನಾಂಕ : 28-4-2012.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 14–8–2008 ರಲ್ಲಿ ರಾಜ್ಯದ ಪ್ರಮುಖ ಪ್ರವಾಸ ಕೇಂದ್ರಗಳಲ್ಲಿ ಸಣ್ಣ ವಿಮಾನ ನಿಲ್ದಾಣಗಳನ್ನು ನಿರ್ಮಿಸಲು ಇದಕ್ಕೆ ಸಂಪರ್ಕ ವ್ಯವಸ್ಥೆ ಸುಧಾರಿಸಲು ರಾಜ್ಯದ 11 ಜಿಲ್ಲೆಗಳಲ್ಲಿ ವಿಮಾನ ಇಳಿದಾಣಗಳನ್ನು ನಿರ್ಮಿಸಲು ನಿರ್ಧರಿಸಿ ದಾವಣಗೆರೆ, ಬಾಗಲಕೋಟೆ, ಮಡಿಕೇರಿ–ಕುಶಾಲನಗರ ಹಾಗೂ ರಾಯಚೂರು ಜಿಲ್ಲೆಗಳಲ್ಲಿ ವಿಮಾನ ಇಳಿದಾಣ ನಿರ್ಮಿಸಲು ಮಧ್ಯಂತರ ಮುಂಗಡವಾಗಿ (Interim Advance) ತಲಾ ರೂ. 20.00 ಲಕ್ಷಗಳನ್ನು ಜಿಲ್ಲಾಧಿಕಾರಿಗಳು, ದಾವಣಗೆರೆ/ಬಾಗಲಕೋಟೆ/ಮಡಿಕೇರಿ/ರಾಯಚೂರು ಜಿಲ್ಲೆಗಳಿಗೆ ಬಿಡುಗಡೆ ಮಾಡಲಾಗಿದೆ.

2. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 18–12–2008 ರಲ್ಲಿ ರಾಜ್ಯದ 11 ವಿಮಾನ ಇಳಿದಾಣಗಳ ನಿರ್ಮಾಣಕ್ಕೆ ಸಂಬಂಧಿಸಿದಂತೆ ರೂ. 38.00 ಲಕ್ಷಗಳನ್ನು ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರಕ್ಕೆ ಸಮಾಲೋಚಕ ಸೇವಾ ಶುಲ್ಕವಾಗಿ (Consultation service fee) ಆಯುಕ್ತರು, ಕರ್ನಾಟಕ ಗೃಹ ನಿರ್ಮಾಣ ಮಂಡಳಿ (K.H.B.) ಬೆಂಗಳೂರು ಇವರಿಗೆ ಬಿಡುಗಡೆ ಮಾಡಲಾಗಿದೆ.

3. ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 31–1–2009 ರಲ್ಲಿ ರಾಜ್ಯದ 11 ವಿಮಾನ ಇಳಿದಾಣಗಳ ನಿರ್ಮಾಣಕ್ಕೆ ಸಂಬಂಧಿಸಿದಂತೆ ರೂ. 75.00 ಲಕ್ಷಗಳನ್ನು ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರಿಗೆ ಸರ್ವೆ, ಮಣ್ಣು ಪರೀಕ್ಷೆ ಇತ್ಯಾದಿ ಕಾಮಗಾರಿಗಳನ್ನು ಕೈಗೊಳ್ಳಲು ಬಿಡುಗಡೆ ಮಾಡಲಾಗಿದೆ.

4. ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 28–2–2009 ರಲ್ಲಿ ರಾಜ್ಯದ 11 ವಿಮಾನ ಇಳಿದಾಣಗಳ ಅಭಿವೃದ್ಧಿ ವೆಚ್ಚಗಳಿಗಾಗಿ ರೂ.1 05.00 ಲಕ್ಷಗಳನ್ನು ಕರ್ನಾಟಕ ಗೃಹ ಮಂಡಳಿಗೆ ಬಿಡುಗಡೆ ಮಾಡಲಾಗಿದೆ.

5. ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ : 19–3–2009 ರಲ್ಲಿ ಬಾಗಲಕೋಟೆ ಜಿಲ್ಲೆಯಲ್ಲಿ ವಿಮಾನ ಇಳಿದಾಣವನ್ನು ನಿರ್ಮಿಸುವ ಸಲುವಾಗಿ ರೂ. 2.80 ಕೋಟಿಗಳನ್ನು ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲಾಗಿದೆ.

6. ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ಪತ್ರ ದಿನಾಂಕ : 10–4–2012 ರಲ್ಲಿ ಉಪ ವಿಭಾಗಾಧಿಕಾರಿಗಳು, ಬಾಗಲಕೋಟೆ ಇವರು ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕು ಕೊಂಕಣಕೊಪ್ಪ, ಗುಬ್ಬೇರಕೊಪ್ಪ ಮತ್ತು ಹಲಕುರ್ಕಿ ಗ್ರಾಮಗಳಲ್ಲಿ ವಿಮಾನ ಇಳಿದಾಣ ನಿರ್ಮಾಣಕ್ಕಾಗಿ ಗುರುತಿಸಿರುವ 150 ಎಕರೆ ಜಮೀನಿನ ಭೂಸ್ವಾಧೀನ ಪ್ರಕ್ರಿಯೆ ದಿನಾಂಕ : 10–5–2012 ರಂದು ಅಸಿಂಧುಗೊಳ್ಳುತ್ತದೆಂದು ಹಾಗೂ ಇದಕ್ಕಾಗಿ ಈಗಾಗಲೇ ರೂ. 2,99,68.250–00 ಗಳನ್ನು ಭೂಸ್ವಾಧೀನ ವೆಚ್ಚವೆಂದು ಜಮಾ ಮಾಡಿದ್ದು, ಇನ್ನೂ ರೂ. 2,66,11,750–00 ಗಳನ್ನು ಭರಿಸಿರುವುದಿಲ್ಲ.. ಬಾಕಿ ಉಳಿದ ರೂ. 2,66,11,750–00 ಗಳನ್ನು ಬಿಡುಗಡೆ ಮಾಡಿದಲ್ಲಿ ಐತೀರ್ಪನ್ನು ರಚಿಸಿ, ಈ ಐತೀರ್ಪಿಗೆ ಸರ್ಕಾರದಿಂದ ಅನುಮೋದನೆ ಪಡೆಯಬೇಕಾಗಿರುವುದರಿಂದ ಭೂಸ್ವಾಧೀನ ಪ್ರಕ್ರಿಯೆಯ ಅವಶ್ಯಕತೆ ಇದ್ದಲ್ಲಿ ಬಾಕಿ ಉಳಿದ ಭೂಸ್ವಾಧೀನ ವೆಚ್ಚ ರೂ. 2,66,11,750–00 ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

7. ಮೇಲೆ ಕ್ರಮ ಸಂಖ್ಯೆ (8) ರಲ್ಲಿ ಓದಲಾದ ಪತ್ರ ದಿನಾಂಕ : 28–4–2012 ರಲ್ಲಿ ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರು ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕು ಕೊಂಕಣಕೊಪ್ಪ, ಗುಬ್ಬೇರಕೊಪ್ಪ ಮತ್ತು ಹಲಕುರ್ಕಿ ಗ್ರಾಮಗಳಲ್ಲಿ ವಿಮಾನ ನಿಲ್ದಾಣ ಕುರಿತು 150 ಎಕರೆ ಜಮೀನಿನ ಭೂಸ್ವಾಧೀನ ಪ್ರಕ್ರಿಯೆ ದಿನಾಂಕ : 10–5–2012 ರಂದು ಅಸಿಂಧುಗೊಳ್ಳುತ್ತದೆಂದು ತಿಳಿಸಿರುತ್ತಾರೆ. ಆದರೆ ಜಿಲ್ಲಾಧಿಕಾರಿಗಳ ಅಭಿಪ್ರಾಯದಂತೆ, ಸಧ್ಯಕ್ಕೆ ವಿಮಾನಯಾನ ಸೇವೆಗೆ ಸಂಬಂಧಿಸಿದ ಆರ್ಥಿಕ ಸ್ಥಿತಿ ಕುಸಿದು ಹೋಗಿರುವುದರಿಂದ ಈಗ ವಿಮಾನ ಇಳಿದಾಣ ನಿರ್ಮಾಣ ಮಾಡುವುದು ಸೂಕ್ತವಲ್ಲವೆಂದು ಹಾಗೂ ಒಂದು ವೇಳೆ ಸಣ್ಣ ಪ್ರಮಾಣದ ವಿಮಾನ ಇಳಿದಾಣ ನಿರ್ಮಿಸಿದರೂ ಸಹ ಇದಕ್ಕೆ ಸಾಕಷ್ಟು ಸೇವೆ ಚಟುವಟಿಕೆ ಲಭ್ಯವಾಗುವುದಿಲ್ಲವೆಂದು ತಿಳಿಸಿರುತ್ತಾರೆ.

8. ಈ ಹಿನ್ನೆಲೆಯಲ್ಲಿ ಹಾಗೂ ಇತರೆ ರಾಜ್ಯಗಳಲ್ಲಿ ಈಗಾಗಲೇ ಕಾರ್ಯಾಚರಣೆಯಲ್ಲಿರುವ ವಿಮಾನಯಾನ ಸೇವೆಗೆ ಸಂಬಂಧಿಸಿದ ನಿಯಮ ನೀತಿಗಳನ್ನು ಗಮನದಲ್ಲಿಟ್ಟುಕೊಂಡು ಕರ್ನಾಟಕ ರಾಜ್ಯದಲ್ಲಿ ಸಣ್ಣ ವಿಮಾನ ನಿಲ್ದಾಣಗಳ ನಿರ್ಮಾಣಕ್ಕೆ ಒಂದು ನೀತಿಯನ್ನು ರಚಿಸಲಾಗುತ್ತಿದೆ. ಅಲ್ಲಿಯ ತನಕ ಸಣ್ಣ ವಿಮಾನ ನಿಲ್ದಾಣ/ಇಳಿದಾಣ ನಿರ್ಮಾಣ ಕಾರ್ಯ ಕೈಗೊಳ್ಳುವುದು ಸೂಕ್ತವಲ್ಲೆಂದು ಭಾವಿಸಲಾಗಿದೆ. ಈಗಾಗಲೇ ನಿರ್ಮಾಣವಾಗಿರುವ ಮೈಸೂರು ಮತ್ತು ಬೆಳಗಾವಿ ವಿಮಾನ ನಿಲ್ದಾಣಗಳಲ್ಲಿ ಸ್ಥಗಿತಗೊಂಡಿರುವ ವಿಮಾನಯಾನ ಸೇವೆಯ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆಯಲ್ಲಿ ವಿಮಾನ ಇಳಿದಾಣ ನಿರ್ಮಾಣ ಕಾರ್ಯವು ಸೂಕ್ತವಲ್ಲವೆಂದು ನಿರ್ಧರಿಸಲಾಗಿದೆ. ಅದರಂತೆ, ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಮೂಅಇ 125 ರಾಅವಿ 2008, ಬೆಂಗಳೂರು, ದಿನಾಂಕ : 27–8–2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ವಿಮಾನಯಾನ ಸೇವೆಗೆ ಸಂಬಂಧಿಸಿದಂತೆ ಆರ್ಥಿಕ ಸ್ಥಿತಿ ಕುಸಿದು ಹೋಗಿರುವುದರಿಂದ ಹಾಗೂ ಬಾಗಲಕೋಟೆಗೆ ಸಮೀಪದ ಬೆಳಗಾಂ ಮತ್ತು ಹುಬ್ಬಳ್ಳಿ–ಧಾರವಾಡ ಜಿಲ್ಲೆಗಳಲ್ಲಿ ಈಗಾಗಲೇ ವಿಮಾನ ನಿಲ್ದಾಣಗಳಿರುವುದರಿಂದ ಹಾಗೂ ಬಿಜಾಪುರದಲ್ಲಿ ವಿಮಾನ ನಿಲ್ದಾಣ ನಿರ್ಮಾಣಕ್ಕಾಗಿ ಪ್ರಕ್ರಿಯೆ ಜಾರಿಯಲ್ಲಿರುವುದರಿಂದ ಬಾಗಲಕೋಟೆ ಜಿಲ್ಲೆಯಲ್ಲಿ ವಿಮಾನ ಇಳಿದಾಣ ನಿರ್ಮಿಸುವುದು ಸೂಕ್ತವಲ್ಲವೆಂದು ನಿರ್ಧರಿಸಲಾಗಿದೆ.

2. ಜಿಲ್ಲಾಧಿಕಾರಿಗಳು, ಬಾಗಲಕೋಟೆ ಜಿಲ್ಲೆ ಇವರಿಗೆ ಈಗಾಗಲೇ ಭೂಸ್ವಾಧೀನಕ್ಕಾಗಿ ಸರ್ಕಾರದಿಂದ ಇದುವರೆವಿಗೂ ಬಿಡುಗಡೆ ಮಾಡಿರುವ ಮೊತ್ತವನ್ನು ಸರ್ಕಾರಕ್ಕೆ ಜಮೆ ಮಾಡುವಂತೆ ಹಾಗೂ ಬಾಗಲಕೋಟೆ ವಿಮಾನ ನಿಲ್ದಾಣದ ಅಭಿವೃದ್ಧಿ ಕಾರ್ಯಕ್ಕೆ ಬಿಡುಗಡೆ ಮಾಡಿದ ಹಣದಲ್ಲಿ ಯಾವ ಯಾವ ಉದ್ದೇಶಕ್ಕಾಗಿ ಹಣವನ್ನು ಖರ್ಚುಮಾಡಲಾಗಿದೆ ಎಂಬ ವಿವರಗಳನ್ನೂ ಸಹ ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

3. ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರು ಇವರು ಬಾಗಲಕೋಟೆ ವಿಮಾನ ನಿಲ್ದಾಣದ ಅಭಿವೃದ್ಧಿ ಕಾರ್ಯಕ್ಕೆ ಸರ್ಕಾರದಿಂದ ಬಿಡುಗಡೆ ಮಾಡಿದ ಹಣದ ವಿವರಗಳು ಹಾಗೂ ಯಾವ ಉದ್ದೇಶಕ್ಕೆ ಹಣ ಖರ್ಚು ಮಾಡಲಾಗಿದೆ ಎಂಬ ಮಾಹಿತಿಯ ಪೂರ್ಣ ವಿವರಗಳನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ.

**P.R. 415**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು